KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಆಗಸ್ಟ್ ೨೦, ೨೦೦೯ (ಶ್ರಾವಣ ೨೯, ಶಕ ವರ್ಷ ೧೯೩೧) | ಸಂಚಿಕೆ ೩೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ನ್ಯಾಯಾಂಗ ಅಧಿಕಾರಿಗಳ ಗೃಹಪರಿಚಾರಕ ಭತ್ಯೆಯನ್ನು ಪರಿಷ್ಕರಿಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಲಾ 177 ಎಲ್ಏಎಂ 90 ದಿನಾಂಕ: 11.10.1991
2. ಸರ್ಕಾರದ ಆದೇಶ ಸಂಖ್ಯೆ : ಲಾ 230 ಎಲ್ಸಿಇ 91 ದಿನಾಂಕ: 09.04.1992
3. ಸರ್ಕಾರದ ಆದೇಶ ಸಂಖ್ಯೆ : ಲಾ 154 ಎಲ್ಏಸಿ 96 ದಿನಾಂಕ: 15.02.1997
4. ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ಮನವಿಪತ್ರ ದಿನಾಂಕ : 18.6.2008

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶಗಳನ್ವಯ ನ್ಯಾಯಾಂಗ ಅಧಿಕಾರಿಗಳಿಗೆ ಗೃಹಪರಿಚಾರಕ ಭತ್ಯೆಯನ್ನು ನೀಡಲಾಗುತ್ತಿದ್ದು ಕ್ರ.ಸಂ. (3) ರಲ್ಲಿ ಓದಲಾದ ದಿನಾಂಕ: 15.2.1997ರ ಸರ್ಕಾರದ ಆದೇಶದಲ್ಲಿ ಸದರಿ ಭತ್ಯೆಯ ಮೊತ್ತವನ್ನು ಮಾಹೆಯಾನ ರೂ 300.00 ರಿಂದ ರೂ. 700.00 ಕ್ಕೆ ಹೆಚ್ಚಿಸಲಾಗಿದೆ. ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ಸಂಘವು ದಿನಾಂಕ: 18.6.2008 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 196 ಸಿಎಸ್ಆರ್ 2006 ದಿನಾಂಕ:16.5.2006 ರಲ್ಲಿ ಗೃಹಪರಿಚಾರಕ ಭತ್ಯೆಗೆ ಗುರುತಿಸಿರುವ ಅಧಿಕಾರಿಗಳಿಗೆ ನೀಡಲಾಗುತ್ತಿದ್ದ ರೂ 700.00 ಮೊತ್ತದ ಭತ್ಯೆಯನ್ನು ಮಾಹೆಯಾನ ರೂ. 1500.00 ಕ್ಕೆ ಏರಿಕೆ ಮಾಡಿರುತ್ತದೆ. ಅದೇ ರೀತಿಯಲ್ಲಿ ಜೀವನ ನಿರ್ವಹಣಾ ವೆಚ್ಚ ಹಾಗೂ ದರಗಳಲ್ಲಿ ಉಂಟಾಗಿರುವ ಏರಿಕೆಗಳನ್ನು ಪರಿಗಣನೆಗೆ ತೆಗೆದುಕೊಂಡು ನ್ಯಾಯಾಂಗ ಅಧಿಕಾರಿಗಳಿಗೂ ಸಹ ಗೃಹಪರಿಚಾರಕ ಭತ್ಯೆಯನ್ನು ರೂ. 1500.00ರ ಮೊತ್ತಕ್ಕೆ ಏರಿಸಬೇಕೆಂಬ ಕೋರಿಕೆ ಮಾಡಿರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 135 ಎಲ್ಏಸಿ 2008, ಬೆಂಗಳೂರು, ದಿನಾಂಕ: 18ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ರಾಜ್ಯದಲ್ಲಿ ನ್ಯಾಯಾಂಗ ಅಧಿಕಾರಿಗಳಿಗೆ ನೀಡಲಾಗುತ್ತಿರುವ ಮಾಸಿಕ ಗೃಹಪರಿಚಾರಕ ಭತ್ಯೆಯನ್ನು ಏಪ್ರಿಲ್ 2009 ರಿಂದ ಜಾರಿಗೆ ಬರುವಂತೆ ರೂ. 700.00 ರಿಂದ ರೂ. 1500–00ಕ್ಕೆ (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಹೆಚ್ಚಿಸಲು ಆದೇಶಿಸಲಾಗಿದೆ. ಈ ಸಂಬಂಧದಲ್ಲಿ ಮೇಲೆ ಓದಲಾದ ಆದೇಶಗಳಲ್ಲಿ ಈಗಾಗಲೇ ನಿಗದಿಪಡಿಸಲಾಗಿರುವ ಷರತ್ತು ಹಾಗೂ ನಿಬಂದನೆಗಳು ಹಾಗೆಯೇ ಮುಂದುವರಿಯುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್ಡಿ 88 ಎಸ್ಇಆರ್–2/2009 ದಿನಾಂಕ: 3.4.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸಿದ್ದಲಿಂಗೇಶ್**

ಸರ್ಕಾರದ ಕಾರ್ಯದರ್ಶಿ,

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 1318

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದುಪಡ್ಡಿ (i)**

**ಸಂಖ್ಯೆ ಆಕುಕ 184 ಎಂಎಸ್‌ಎಸ್ 2008, ಬೆಂಗಳೂರು, ದಿನಾಂಕ: 20ನೇ ಮೇ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 184 ಎಂಎಸ್‌ಎಸ್ 2008 (i) ದಿನಾಂಕ 19/5/2009 ರಲ್ಲಿ "ಡಾ: ವಿ.ಡಿ.ಹಳಕಟ್ಟಿ" ಎಂದಿರುವುದನ್ನು "ಡಾ: ಆರ್.ವ್ಹಿ. ಹಳ್ಳಕಟ್ಟಿ" (Dr.R.V.Halakatti) ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 1366

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**URBAN DEVELOPMENT SECRETARIAT**

**Sub:** Appointment of Mrs. Anantha lakshmi as transport planner –in the directorate of urban land transport….Reg.

**Read:** 1. Government Order No. UDD 134 BMR 2006(1), Bangalore, Dated 08.03.2007.

**Preamble :**

As per the recommendation for the National working group on urban transport for the 11th plan and the guidenlines of the National urban transport policy, the Government o Karnataka in its Government order read at (1) has created the state directorate of urban land transport (DULT) under the urban development department. The key objective of the DULT is to ensure integration and coordination of land-use planning and development of transport related infrastructure in urban areas.

The functions of DULT has been defined in G. O. read at (1) with jurisdictions of seven municipal corporations in the state, viz., Bangalore, Mysore, Mangalore, Hubli- Dharwad, belgaum, Gulbarga and Bellary. Accordingly, one of the key functions is to take up comprehensive traffic and transportation studies (CTTS) for six cities, excluding Bangalore. Also DULT will take up the CTTS for two tier cities like shimoga, Udipi, Tumkur, Davangere and Sky walk policies and not –motorized transport development in Bangalore Metropolitan region during 2009-10.

The team under the commissioner, DULT is required to address the above mentioned critical areas on priority. It is noted that addressing these tasks and challenges requires the active role of specialists with multidisciplinary approaches. The specialists should have an understanding of the planning, technology for planning, land-use changes, planning with focus on mobility related aspects and capacity building competencies.

Mrs. Ananthalakshmi who has a master degree in transportation engineering from Indian institute of technology, Delhi having sound academic knowledge of the subject and she has worked under the guidance o prof. geetham Tiwari for her thesis on the subject of BRT at pune. She has also an experience as a software Engineer in infosys Technologies private limited and with this technical knowledge she has found Suitable to work as a transport planner in DULT.

Therefore it is felt necessary to utilize services of Mrs. Ananthalakshmi as Transport planner in DULT. Hence the following Order.

**Government order No. UDD 4 CAR 2009, Bangalore, Dated: 16th May 2009**

Government are pleased to accord sanction to utilize the services of Mrs. Anathalakshmi Transport Planner- in the directorate of Urban Land Transport on contract basis under the sanctioned vacant post of Transport planner initially for a period of six months on the following conditions.

1. Production of master degree certificates
2. The candidate shall furnish a bond with an undertaking to serve DULT for a minimum period of six months.
3. In case of leaving the DULT service before six months she should bring to the notice of DULT one month earlier.

Her services can be utilized in the following areas:-

1. preparation of comprehensive traffic and transportation plan for six city corporations.
2. Periodic assessment of travel demand in given Urban Area.
3. Determination of level or requirements to public transport and type of transport system on different corridors.
4. Setting of policy guidelines for development of total network in Urban Area
5. Road Network planning in the Urban Area.
6. Any other work assigned by the commissioner, DULT.

The services of Mrs. Ananthalakshmi will be utilized until such time the commissioner, DULT deems fit.

Mrs. Anathalakshmi would be paid a consolidated compensation of Rs. 18,000.00 per month.

By order and in the name of the Governor of Karnataka

P.R. 1334

**M.S. PREMACHANDRA**

Under secretary to Govt., Urban Development Department

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎ.ಹೆಚ್. ಹೊನಕೇರಿ, ಶಾಖಾಧೀಕ್ಷಕರು, ಪೊಲೀಸ್ ಆಯುಕ್ತರ ಕಛೇರಿ, ಹುಬ್ಬಳ್ಳಿ–ಧಾರವಾಡ ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿಯ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಚೇರಿ ಪತ್ರ ಸಂಖ್ಯೆ: ಅಪೀಲು (1)04/2006–07 ದಿನಾಂಕ 08–11–2008.

**ಪ್ರಸ್ತಾವನೆ:**

ಶ್ರೀಮತಿ ನಾಗವ್ವ ಕೋಂ ಶಾಂತಪ್ಪ, ಕುರುಂದವಾಡ ಸಾ// ಬಂಕಾಪುರ ಇವರು ಮಾನ್ಯ ಕೆಎಟಿ, ಬೆಂಗಳೂರಿನಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ 2292/99 ನೇದ್ದು ದಿನಾಂಕ 24–05–1999 ರಂದು ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಇಲ್ಲಿ ಸ್ವೀಕೃತವಾಗಿರುತ್ತದೆ. ಆದರೆ ಸದರಿ ಅರ್ಜಿಗೆ ಕಂಡಿಕಾವಾರು ಷರಾ ವರದಿಯನ್ನು ಕೆಎಟಿಗೆ ದಿನಾಂಕ:01–02–2006 ರವರೆಗೆ ಸಲ್ಲಿಸದೇ 06 ವರ್ಷಗಳ ಕಾಲ ಬಾಕಿ ಇಡಲು ಕಾರಣಿಭೂತರಾಗಿರುವ ಎ.ಯು.ನಾಯಕ ಪ್ರದಸ, ಎಚ್.ಬಿ.ಟಕ್ಕಳಕಿ ಪ್ರದಸ ಜಿಲ್ಲಾ ಪೊಲೀಸ್ ಕಚೇರಿ, ಗದಗ ಹಾಗೂ ಎ.ಎಚ್. ಹೊನಕೇರಿ, ಶಾಖಾಧೀಕ್ಷಕರು, ಪೊಲೀಸ್ ಆಯುಕ್ತರವರ ಕಛೇರಿ ಹುಬ್ಬಳ್ಳಿ–ಧಾರವಾಡ ನಗರ ಆದ ತಾವುಗಳು ಕರ್ತವ್ಯದಲ್ಲಿ ನಿರ್ಲಕ್ಷತೆ ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪವೆಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆಯನ್ನು ನಡೆಸಿ ಇವರ ಮೇಲಿನ ಆಪಾದನೆ ದೃಢಪಟ್ಟಿರುತ್ತದೆ ಎಂದು ತಿಳಿಸಿರುತ್ತಾರೆ. ಇಲಾಖಾ ವಿಚಾರಣೆಯ ವರದಿಯನ್ನು ಒಪ್ಪಿ ಡಿಜಿ ಮತ್ತು ಐಜಿಪಿ ರವರು ದಿನಾಂಕ 21–04–2008 ರಂದು ಶ್ರೀ ಎ.ಎಚ್. ಹೊನಕೇರಿ ಶಾಖಾಧೀಕ್ಷಕರು ಇವರ ವಿರುದ್ಧ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷದ ಅವಧಿಗೆ ಮುಂದೂಡಲಾಗಿರುತ್ತದೆ.ಈ ಆದೇಶದ ವಿರುದ್ಧ ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.

ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಾಬೀತಾಗಿದ್ದು ಮೇಲ್ಮನವಿಯಲ್ಲಿ ಕರ್ತವ್ಯ ಚ್ಯುತಿ ಮಾಡದಿರುವುದಕ್ಕೆ ಕಾರಣಗಳಾಗಲಿ ಅಥವಾ ಹೊಸ ಸಮರ್ಥನೆಯನ್ನಾಗಲಿ ನೀಡಿರುವುದಿಲ್ಲ ಹಾಗೂ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 98 ಪೊಸಿಲಿ 2008 ಬೆಂಗಳೂರು, ದಿನಾಂಕ: 22ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎ.ಹೆಚ್. ಹೊನಕೇರಿ, ಶಾಖಾಧೀಕ್ಷಕರು, ಪೊಲೀಸ್ ಆಯುಕ್ತರ ಕಚೇರಿ, ಹುಬ್ಬಳ್ಳಿ–ಧಾರವಾಡ ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1335

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಆಇ 54 ಇಡಬ್ಲ್ಯೂಪಿ 2008, ಬೆಂಗಳೂರು, ದಿನಾಂಕ: 26ನೇ ಮೇ 2009**

ಸರ್ಕಾರದ ಆದೇಶ ಸಂಖ್ಯೆ: ಆಇ 54 ಇಡಬ್ಲ್ಯೂಪಿ 2008 ದಿನಾಂಕ:26/05/2009 ರಲ್ಲಿ ಅಮಾನತ್ತನ್ನು ರದ್ದುಪಡಿಸಿ ಸರ್ಕಾರದ ಸೇವೆಗೆ ಪುನರ್ ನೇಮಕ ಮಾಡಲಾಗಿರುವ ರಾಜ್ಯ ಅಬಕಾರಿ ಸೇವೆಗೆ ಸೇರಿದ ಶ್ರೀ ಆರ್. ರಾಜಣ್ಣ, ಅಬಕಾರಿ ಜಂಟಿ ಆಯುಕ್ತರು ಇವರನ್ನು ಖಾಲಿ ಇರುವ ಬಳ್ಳಾರಿ ಜಿಲ್ಲೆಯ ಹೊಸಪೇಟೆ ವಿಭಾಗದ ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಹುದ್ದೆಗೆ ತಕ್ಷಣದಿಂದ. ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1339

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ).

**ವಿಷಯ:** ಶ್ರೀ ಆರ್. ರಾಜಣ್ಣ, ಅಬಕಾರಿ ಜಂಟಿ ಆಯುಕ್ತರು ಇವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಆಇ 36 ಇಪಿಎಸ್ 2000 ದಿನಾಂಕ:17/04/008
2. ಕರ್ನಾಟಕ ಲೋಕಾಯುಕ್ತ ಪೊಲೀಸ್, ಬೆಂಗಳೂರು ಗ್ರಾಮಾಂತರ ರವರು ಲಂಚ ನಿರೋಧಕ ಕಾಯ್ದೆ 1988 ರ ಸೆಕ್ಷನ್ 13 (1)(ಇ)ಆರ್/ಡಬ್ಲ್ಯೂ ಸೆಕ್ಷನ್ 13(2)ರಲ್ಲಿ ಶ್ರೀ ಆರ್. ರಾಜಣ್ಣ ಅಬಕಾರಿ ಜಂಟಿ ಆಯುಕ್ತರವರ ವಿರುದ್ಧ ದಿನಾಂಕ: 22/01/2000 ರಂದು ದಾಖಲಿಸಿರುವ ಕ್ರಿಮಿನಲ್ ಕೇಸ್ ಸಂಖ್ಯೆ:ಸಿ.ಆರ್.1/2000
3. ಕರ್ನಾಟಕ ಲೋಕಾಯುಕ್ತ ಪೊಲೀಸ್ ರವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿಶೇಷ ನ್ಯಾಯಾಲಯ, ಬೆಂಗಳೂರು ಇಲ್ಲಿ ಶ್ರೀ ಆರ್. ರಾಜಣ್ಣ, ಅಬಕಾರಿ ಜಂಟಿ ಆಯುಕ್ತರವರ ವಿರುದ್ಧ ಜಾರ್ಜ್ ಶೀಟ್‌ನ್ನು ದಾಖಲಿಸಿರುವ ವಿಶೇಷ ಸಿಸಿ ಸಂಖ್ಯೆ :19/2008
4. ಅರ್ಜಿ ಸಂಖ್ಯೆ :2388/2008 ರಲ್ಲಿ ದಿನಾಂಕ :01/10/2008 ರಂದು ಕರ್ನಾಟಕ ಆಡಳಿತ ಮಂಡಳಿಯು ನೀಡಿದ ಆದೇಶ
5. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ : ಇಸಿಇ/47/ಕೆಎಟಿ/2008 ದಿನಾಂಕ :25/03/2009

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಉಲ್ಲೇಖ (2) ರಲ್ಲಿ ತಿಳಿಸಿದ ಲೋಕಾಯುಕ್ತ ದಾಳಿ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಆರ್. ರಾಜಣ್ಣ, ಅಬಕಾರಿ ಜಂಟಿ ಆಯುಕ್ತರು ಇವರನ್ನು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1) ಆದೇಶದನ್ವಯ. ಅಮಾನತ್ತುಗೊಳಿಸಿಲಾಗಿತ್ತು. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (4) ರ ಆದೇಶದಲ್ಲಿ ಶ್ರೀ ಆರ್. ರಾಜಣ್ಣ, ಅಬಕಾರಿ ಜಂಟಿ ಆಯುಕ್ತರು ಇವರ ಅಮಾನತ್ತು ಆದೇಶವನ್ನು ರದ್ದು ಪಡಿಸಿರುತ್ತದೆ.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ಆದೇಶದನ್ವಯ ಶ್ರೀ ಆರ್. ರಾಜಣ್ಣ, ರವರ ಅಮಾನತ್ತನ್ನು ರದ್ದುಪಡಿಸಿ ಉಲ್ಲೇಖ (3) ರ ಪ್ರಕರಣದಲ್ಲಿನ ತೀರ್ಪಿಗೊಳಪಟ್ಟು ಅವರನ್ನು ಪುನಃ ಕರ್ತವ್ಯದ ಮೇಲೆ ತೆಗೆದುಕೊಳ್ಳಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಇ 54 ಇಡಬ್ಲ್ಯೂಪಿ 2008, ಬೆಂಗಳೂರು, ದಿನಾಂಕ: 26ನೇ ಮೇ 2009**

ಸರ್ಕಾರವು, ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 10(5)(ಸಿ) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್. ರಾಜಣ್ಣ, ಅಬಕಾರಿ ಜಂಟಿ ಆಯುಕ್ತರು (ಪ್ರಸ್ತುತ ಅಮಾನತ್ತಿನಲ್ಲಿರುವವರು) ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿಶೇಷ ನ್ಯಾಯಾಲಯದಲ್ಲಿ ದಾಖಲಿಸಿದ ಪ್ರಕರಣ ವಿಶೇಷ ಸಿ.ಸಿ.ಸಂಖ್ಯೆ:19/2008 ರಲ್ಲಿನ ಅಂತಿಮ ಆದೇಶಕ್ಕೆ ಒಳಪಟ್ಟು ಸದರಿಯವರ ಅಮಾನತ್ತನ್ನು ರದ್ದುಪಡಿಸಲು ಹಾಗೂ ಇವರನ್ನು ಸರ್ಕಾರದ ಸೇವೆಗೆ ಪುನರ್‌ನೇಮಕಗೊಳಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1340

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ).

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ/ರಶಾ/ಸಿಇ೦4/2008–09, ದಿನಾಂಕ 13–02–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು **ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ 4.30 ಕಿ. ಮೀ ಉದ್ದದ ರಾ.ಹೆ. –48 ರಿಂದ ಎಡಿಯೂರು ದೇವಸ್ಥಾನ, ಕೊಡವತ್ತಿ ಮುಖಾಂತರ ರಾಜ್ಯ ಹೆದ್ದಾರಿ–84 ನ್ನು ಸಂಪರ್ಕಿಸುವ** ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೆಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 226 ಸಿ ಆರ್ ಎಂ 2009, ಬೆಂಗಳೂರು, ದಿನಾಂಕ: 22ನೇ ಮೇ 2009**

**ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ 4.30 ಕಿ. ಮೀ ಉದ್ದದ ರಾಹೆ. 48 ರಿಂದ ಎಡಿಯೂರು ದೇವಸ್ಥಾನ, ಕೊಡವತ್ತಿ ಮುಖಾಂತರ ರಾಜ್ಯ ಹೆದ್ದಾರಿ –84ನ್ನು ಸಂಪರ್ಕಿಸುವ** ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೊದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಪಿ.ಆರ್. 1341

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ವೆಂಕಟೇಶ್, ಹಿಂದಿನ ಅಧೀಕ್ಷಕರು, ಬಾಲಕರ ಬಾಲಮಂದಿರ. ಕೆ.ಜಿ.ಎಫ್., ಹಾಗೂ ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹೊನ್ನಾವರ ಇವರನ್ನು ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ ನಿಸಿಶಿಪ/10/2006–07/ದಿ:19–9–2006. ಶ್ರೀ ವೆಂಕಟೇಶ್ ರವರಿಗೆ 1–4 ಆರೋಪ ಪಟ್ಟಿಗಳೊಂದಿಗೆ ಹೊರಡಿಸಿರುವ ನೋಟೀಸ್.
2. ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ ನಿಸಿಶಿಪ/10/2006–07/ದಿ:13–11–2006 ವಿಚಾರಣಾಧಿಕಾರಿಗಳನ್ನು ನೇಮಿಸಿರುವ ಬಗ್ಗೆ
3. ಶ್ರೀಮತಿ ಎಂ.ಎಂ. ಬಿಂದು ಯೋಜನಾ ನಿರ್ದೇಶಕರು (ಸ್ತ್ರೀಶಕ್ತಿ), ಇವರ ವಿಚಾರಣಾ ವರದಿ.
4. ಸರ್ಕಾರಿ ಪತ್ರ ಸಂಖ್ಯೆ ಮಮಇ/249/ಎಸ್‌ಜೆಡಿ/08/ದಿ:7–6–2008 ಶ್ರೀ ವೆಂಕಟೇಶ್ ರವರಿಗೆ ನೋಟೀಸ್ ನೀಡಿರುವುದು.
5. ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ ಪಿಎಸ್‌ಸಿ/ 79/ಸಿಎನ್‌ಎಸ್/08/ದಿ:6–10–2008.
6. ಸರ್ಕಾರಿ ಪತ್ರ ಸಂಖ್ಯೆ ಮಮಇ/249/ಎಸ್‌ಜೆಡಿ/08 ದಿ: 17–12–2008 2 ನೇ ಸೂಚನಾ ಪತ್ರ.
7. ಶ್ರೀ ವೆಂಕಟೇಶ್ ರವರ ದಿನಾಂಕ :13–1–2009 ರ ಹೇಳಿಕೆ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 19–9–2006 ರ ಪತ್ರದಲ್ಲಿ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಶ್ರೀ ವೆಂಕಟೇಶ್. ಹಿಂದಿನ ಅಧೀಕ್ಷಕರು, ಬಾಲಮಂದಿರ, ಕೆ.ಜಿ.ಎಫ್. ಹಾಗೂ ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹೊನ್ನಾವರ ಇವರಿಗೆ ಆಪಾದನಾ ಪಟ್ಟಿಗಳೊಂದಿಗೆ (1–4)ನೋಟೀಸ್ ನೀಡಿ ಸದರಿಯವರ ವಿರುದ್ಧ ಕೆ. ಸಿ. ಎಸ್ ಆರ್. ಸಿ.ಸಿ.ಎ. 1957 ರ ನಿಯಮ 11 ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದ್ದಾರೆ. ಸದರಿ ಅಧಿಕಾರಿಯವರ ವಿರುದ್ಧ ಎರಡು ಆರೋಪಗಳಿರುತ್ತವೆ. ಮೊದಲನೆಯದಾಗಿ ಶ್ರೀಯುತರು ರಜೆ

ಮಂಜೂರಾತಿ ಪಡೆಯದೆ ದಿ:7-1-2005 ರಿಂದ 14-4-2006ರ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿಯಲ್ಲಿರುವುದು. ಹಾಗೂ ಎರಡನೆಯದಾಗಿ ಬಾಲಕರ ಬಾಲಮಂದಿರ, ಕೆ. ಜಿ. ಎಫ್. ಈ ಸಂಸ್ಥೆಯ ಕಬ್ಬಿಣದ ಒಲೆ ಅನುಪಯುಕ್ತ ಸಾಮಗ್ರಿಗಳನ್ನು ಅಕ್ರಮವಾಗಿ ಸಂಸ್ಥೆಯಿಂದ ಹೊರಗಡೆ ಸಾಗಾಣಿಕೆ ಮಾಡಿ ದಾಸ್ತಾನುವಹಿಯನ್ನು ನಾಶಪಡಿಸಿರುವುದು. ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಯೋಜನಾ ನಿರ್ದೇಶಕರು, ಸ್ತ್ರೀ ಶಕ್ತಿ, ಬೆಂಗಳೂರು ಇವರು ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯಲ್ಲಿ ಶ್ರೀಯುತರ ಮೇಲಿರುವ ಎರಡು ಆರೋಪಗಳು ಸಾಬೀತಾಗಿರುವುದಾಗಿ ವರದಿ ಮಾಡಿರುತ್ತಾರೆ. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಇಲಾಖಾ ವಿಚಾರಣೆಯನ್ನು ಆಧಾರವಾಗಿಟ್ಟು ಕೊಂಡು ಸದರಿಯವರ ವಿರುದ್ಧ ಕಠಿಣ ದಂಡನೆಯಾದ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಶ್ರೀ ವೆಂಕಟೇಶ್ ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಪರಿವೀಕ್ಷಣಾಧಿಕಾರಿ ದರ್ಜೆ-2 ರ ಹುದ್ದೆಯಲ್ಲಿ ನೇಮಿತಗೊಂಡಿದ್ದರಿಂದ ಇವರ ವಿರುದ್ಧ ವಿಧಿಸಬಹುದಾದ ದಂಡನೆಯನ್ನು ಆಯೋಗಕ್ಕೆ ತಿಳಿಸಿ ಅವರ ಅಭಿಪ್ರಾಯವನ್ನು ಸರ್ಕಾರವು ಕೋರಿದ್ದು ಆಯೋಗವು ಮೇಲೆ ಓದಲಾದ (5) ರ ಪತ್ರದಲ್ಲಿ Annual Stock Verification ಸಂದರ್ಭದಲ್ಲಿ ಹಿರಿಯ ಅಧಿಕಾರಿಗಳು ತಯಾರಿಸಿದ ಪಟ್ಟಿಯನ್ವಯ ಅನುಪಯುಕ್ತ ಸಾಮಗ್ರಿಗಳ ಬೆಲೆಗಳನ್ನು ನಿಗಧಿಪಡಿಸಿ ಆ ಹಣವನ್ನು ಆಪಾದಿತ ನೌಕರರಿಂದ ವಸೂಲಿ ಮಾಡುವುದು ಹಾಗೂ 1 ವರ್ಷ, 3 ತಿಂಗಳು, 8 ದಿನಗಳ ಗೈರು ಹಾಜರಿಯನ್ನು ಅನಧಿಕೃತ ಗೈರುಹಾಜರಿಯೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8 (vi) ರಡಿಯಲ್ಲಿ ಕಡ್ಡಾಯ ನಿವೃತ್ತಿ ದಂಡನೆಯನ್ನು ವಿಧಿಸಬಹುದಾಗಿದೆಯೆಂದು ಅಭಿಪ್ರಾಯ ನೀಡಿರುತ್ತಾರೆ. ಈ ಅಭಿಪ್ರಾಯವನ್ನು ಆಧರಿಸಿ ಸರ್ಕಾರವು ಶ್ರೀಯುತರಿಗೆ ಎರಡನೇ ಸೂಚನಾ ಪತ್ರವನ್ನು ಹೊರಡಿಸಿ ಅವರ ವಿರುದ್ಧ ಜರುಗಿಸಲು ಉದ್ದೇಶಿಸಲಾದ ದಂಡನೆಯನ್ನು ತಿಳಿಸಿರುತ್ತದೆ. ಶ್ರೀಯುತರು ಈ ನೋಟೀಸ್‌ಗೆ ಉತ್ತರ ನೀಡಿ ತಾವು ದಿ:7-1-2005 ರಿಂದ 14-4-2006 ರ ಅವಧಿಯಲ್ಲಿ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ನಿಜವೆಂದು, ಇದಕ್ಕೆ ತಮ್ಮ ತಾಯಿಯವರ ನಿಧನದಿಂದ ಉಂಟಾದ ಮಾನಸಿಕ ಕ್ಲೇಶವು ಕಾರಣವೆಂದು ತಿಳಿಸಿದ್ದಾರೆ. ಎರಡನೇ ಆರೋಪದ ಬಗ್ಗೆ ವಿಚಾರಣಾ ಸಂದರ್ಭದಲ್ಲಿ ತಮಗೆ ತಮ್ಮ ನಿಲುವನ್ನು ಹೇಳಲು ಅವಕಾಶವನ್ನೇ ನೀಡದೆ ಬರಿ ಸಾಕ್ಷಿಗಳ ಹೇಳಿಕೆಗಳ ಆಧಾರದ ಮೇಲೆ ಆರೋಪವು ರುಜುವಾತಾಗಿದೆಯೆಂದು ವಿಚಾರಣಾಧಿಕಾರಿಗಳು ತೀರ್ಮಾನಕ್ಕೆ ಬಂದಿರುವುದರಿಂದ ಈ ವಿಷಯದಲ್ಲಿ ತಮಗೆ ಅನ್ಯಾಯವಾಗಿದೆಯೆಂದು ದಿನಾಂಕ:2-7-2008 ರಂದು ನೀಡಿರುವ ತಮ್ಮ ಸಮಜಾಯಿಷಿಯನ್ನು ಪರಿಶೀಲಿಸಿ ಮತ್ತೆ ವಿಚಾರಣೆ ನಡೆಸಿ ತಮಗೆ ರಕ್ಷಣಾತ್ಮಕ ಹೇಳಿಕೆ ನೀಡಲು ಅವಕಾಶ ನೀಡಬೇಕೆಂದು ಕೋರಿದ್ದಾರೆ. ಶ್ರೀಯುತರ ಹೇಳಿಕೆಯನ್ನು ಪರಿಶೀಲಿಸಲಾಗಿ ಅಪಾದನೆಗಳನ್ನು ಅಲ್ಲಗಳೆಯುವಂತಹ ಯಾವುದೇ ಪುಷ್ಟೀಕರಣ ನೀಡುವ ಅಂಶಗಳು ಅವರ ವಿವರಣೆಯಲ್ಲಿ ಇಲ್ಲವಾದ್ದರಿಂದ ಶ್ರೀಯುತರ ವಿವರಣೆಯನ್ನು ಸರ್ಕಾರವು ಒಪ್ಪಿರುವುದಿಲ್ಲ. ವಿಚಾರಣಾ ವರದಿಯನ್ನು ಸರ್ಕಾರವು ಸಮಗ್ರವಾಗಿ ಪರಿಶೀಲಿಸಿದ್ದು ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗ ನೀಡಿರುವ ಸಹಮತಿಯ ಹಿನ್ನೆಲೆಯಲ್ಲಿ ಸದರಿಯವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಮಇ 249 ಎಸ್‌ಜೆಡಿ 2008 ಬೆಂಗಳೂರು, ದಿನಾಂಕ: 25ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಶ್ರೀ ವೆಂಕಟೇಶ್, ಹಿಂದಿನ ಅಧೀಕ್ಷಕರು, ಬಾಲಮಂದಿರ, ಕೆ.ಜಿ.ಎಫ್., ಹಾಗೂ ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹೊನ್ನಾವರ ಇವರ ವಿರುದ್ಧ ನಡೆದ ಇಲಾಖಾ ವಿಚಾರಣೆಯಲ್ಲಿ ದಿ: 07-01-2005 ರಿಂದ 14-4-2006 ರವರೆಗಿನ ಅನಧಿಕೃತ ಗೈರುಹಾಜರಿಯ ಬಗ್ಗೆ ಹಾಗೂ ಅನುಪಯುಕ್ತ ವಸ್ತುಗಳ ಕಬ್ಬಿಣದ ಒಲೆ ಅಕ್ರಮವಾಗಿ ಸಂಸ್ಥೆಯಿಂದ ಹೊರಗಡೆ ಸಾಗಾಣಿಕೆ ಮಾಡಿ ದಾಸ್ತಾನುವಹಿಯನ್ನು ನಾಶಪಡಿಸಿರುವುದು ಈ ಎರಡು ಆರೋಪಗಳು ಸಾಬೀತಾಗಿದ್ದು, ಇವರ ವಿರುದ್ಧ Annual stock verification ಸಂದರ್ಭದಲ್ಲಿ ಹಿರಿಯ ಅಧಿಕಾರಿಗಳು ತಯಾರಿಸಿದ ಪಟ್ಟಿಯನ್ವಯ ಅನುಪಯುಕ್ತ ಸಾಮಗ್ರಿಗಳ ಬೆಲೆಗಳನ್ನು ನಿಗಧಿಪಡಿಸಿ ಆ ಹಣವನ್ನು ಆಪಾದಿತ ನೌಕರರಿಂದ ವಸೂಲಿ ಮಾಡಲು ಹಾಗೂ ಸದರಿಯವರು ದಿ: 7-1-2005 ರಿಂದ 14-4-2006 ರ ಗೈರುಹಾಜರಿಯ ಅವಧಿಯನ್ನು ಅನಧಿಕೃತ ಗೈರುಹಾಜರಿಯೆಂದು ಪರಿಗಣಿಸಿ, ಕೆ.ಸಿ.ಎಸ್.ಆರ್. ನಿಯಮ (ಸಿಸಿಎ)ನಿಯಾಮವಳಿಗಳ ನಿಯಮ 8(vi) ರಡಿಯಲ್ಲಿ ಸದರಿಯವರನ್ನು ದಿನಾಂಕ:01-6-2009 ರಿಂದ ಅನ್ವಯವಾಗುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ನರಸಿಂಹಯ್ಯ**

ಪಿ.ಆರ್. 1352

ಸರ್ಕಾರದ ಅಧೀನ ಕಾರ್ಯದರ್ಶಿ-2 (ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಬಿ. ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್, ಬಬಲೇಶ್ವರ, ವಿಜಾಪುರ ಜಿಲ್ಲೆ ಇವರು ಕರ್ತಯಕ್ಕೆ ಗೈರು ಹಾಜರಾಗಿರುವುದರಿಂದ, ಸೇವೆಯಿಂದ ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ವಿಜಾಪೂರ ಜಿಲ್ಲೆ ಇವರ ಪತ್ರದ ಸಂ:ಕವಿ:ಸಿಬ್ಬಂದಿ:2:ವಿವ:13/2008–09, ದಿನಾಂಕ: 08.08.2008, 14.11.2008 & 25.2.2009.

**ಪ್ರಸ್ತಾವನೆ:**

ಶ್ರೀ ಬಿ.ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್, ಬಬಲೇಶ್ವರ, ವಿಜಾಪೂರ ಜಿಲ್ಲೆ ಇವರು ದಿನಾಂಕ: 09–04–2008 ರಂದು ಸದರಿ ಹುದ್ದೆಗೆ ಕರ್ತವ್ಯಕ್ಕೆ ಹಾಜರಾಗಿ, ಕಾರ್ಯ ನಿರ್ವಹಿಸುತ್ತಿರುವಾಗ ದಿನಾಂಕ: 29–05–2008 ರಡಿ ಅರ್ಜಿ ಸಲ್ಲಿಸಿ, ವೈಯಕ್ತಿಕ ಆದಾರದ ಮೇಲೆ ದಿನಾಂಕ: 30–05–2008 ರಿಂದ ದಿನಾಂಕ: 10–06–2008 12 ದಿನಗಳ ಅವಧಿಗೆ ಗಳಿಕೆ ರಜೆ ಮಂಜೂರಿಸಲು ಕೋರಿದ್ದ ಮೇರೆಗೆ, ಜಿಲ್ಲಾಧಿಕಾರಿಗಳು ದಿನಾಂಕ: 29–05–2008 ರಲ್ಲಿ ರಜೆಯನ್ನು ಮಂಜೂರು ಮಾಡಿರುತ್ತಾರೆ.

ನಂತರ, ಶ್ರೀಯುತರು ದಿನಾಂಕ: 06–06–2008 ರಂದು ಅರ್ಜಿ ಸಲ್ಲಿಸಿ, ಅನಾರೋಗ್ಯದ ನಿಮಿತ್ತ ರಜೆಯನ್ನು ಮಂಜೂರು ಮುಂದುವರೆಸಲು ವೈಧ್ಯಾಧಿಕಾರಿಗಳ ನಿರ್ದೇಶನದಂತೆ, ದಿನಾಂಕ:06–06–2008 ರಿಂದ 30–06–2008 ವರೆಗೆ ಪರಿವರ್ತಿತ ರಜೆ ಕೋರಿ ರಜೆ ಮುಂದುವರಿಸಿರುತ್ತಾರೆ. ಆದರೆ ಅವರು ರಜೆ ನಂತರ ಕರ್ತವ್ಯಕ್ಕೆ ಹಾಜರಾಗದೆ ಇರುವುದರಿಂದ ಈ ಕಚೇರಿ ಸಮ ಸಂಖ್ಯೆಯ ದಿನಾಂಕ: 08–08–2008 ರಿಂದ ದಿನಾಂಕ:01–07–008 ರಿಂದ ಅನಧಿಕೃತ ಗೈರು ಹಾಜರು ಉಳಿದ ಬಗ್ಗೆ ವಿವರಣೆ ಕೇಳಿ ಕಾರಣ ಕೇಳುವ ನೋಟೀಸು ನೀಡಲಾಗಿದೆ. ಆದರೂ ಅವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಮತ್ತು ನೋಟೀಸಿಗೆ ಉತ್ತರ ಸಹ ನೀಡದೆ ಇರುವುದರಿಂದ, ಅವರಿಗೆ ಮತ್ತೆ ಜಿಲ್ಲಾಧಿಕಾರಿಗಳ ಕಚೇರಿಯಿಂದ ದಿನಾಂಕ:14.11.2008 ರಡಿ 2ನೇ ಕಾರಣ ಕೇಳುವ ನೋಟೀಸು ನೀಡಲಾಗಿ, ಅವರು ತಮ್ಮ ಹೇಳಿಕೆಯನ್ನು ನೀಡದೆ ದಿನಾಂಕ:01–07–2008 ರಿಂದ ಈವತ್ತಿನವರೆಗೂ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಾಗಿ ಉಳಿದಿರುತ್ತಾರೆ. ಆದ್ದರಿಂದ ಜಿಲ್ಲಾಧಿಕಾರಿಗಳು, ವಿಜಾಪೂರ ಜಿಲ್ಲೆ, ವಿಜಾಪೂರ ಇವರು ದಿನಾಂಕ:25–02–2009 ರಂದು ಈ ಕುರಿತು ವರದಿ ಸಲ್ಲಿಸಿ, ಶ್ರೀ ಬಿ. ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್, ಬಬಲೇಶ್ವರ, ವಿಜಾಪೂರ ತಾಲ್ಲೂಕು ಇವರು ದಿನಾಂಕ:01–07–2008 ರಿಂದ ಕಚೇರಿಗೆ ಅನಧಿಕೃತ ಗೈರು ಹಾಜರಾಗಿ ಉಳಿದಿದ್ದರಿಂದ, ಈ ಕುರಿತು ಸೂಕ್ತ ಕ್ರಮ ಜರುಗಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ವಿಜಾಪೂರ ಜಿಲ್ಲೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಬಿ.ಹೆಚ್. ಶಿವಪ್ಪ ಇವರು ಕಚೇರಿಗೆ ಗೈರು ಹಾಜರಾಗಿರುವ ಕುರಿತು, ಕಾರಣ ಕೇಳುವ ನೋಟೀಸನ್ನು ಹಾಗೂ ಎರಡನೇ ಕಾರಣ ಕೇಳುವ ನೊಟೀಸನ್ನು ಜಾರಿ ಮಾಡಿದ್ದರೂ, ಇದಕ್ಕೂ ಸಹ ಉತ್ತರ ನೀಡದೇ, ಶ್ರೀ ಬಿ.ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್ ಇವರು ಕರ್ತವ್ಯ ಚ್ಯುತಿ ಎಸಗಿದ್ದರಿಂದ, ಅವರನ್ನು ಇಲಾಖಾ ವಿಚಾರಣೆ ಬಾಕಿಯಿರಿಸಿ, ಆಮಾನತ್ತಿನಲ್ಲಿಡಲು ತೀರ್ಮಾನಿಸಿರುತ್ತದೆ ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 04 ಎಡಿಇ 2009, ಬೆಂಗಳೂರು, ದಿನಾಂಕ: 21ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಬಿ.ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್, ಬಬಲೇಶ್ವರ, ವಿಜಾಪೂರ ಜಿಲ್ಲೆ ಇವರು ದಿನಾಂಕ:01–07–2008 ರಿಂದ ಕಚೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10(1) (ಡಿ) ರನ್ವಯ, ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಸದರಿ ಅಧಿಕಾರಿಗಳು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು ವಿಜಾಪೂರ ಜಿಲ್ಲೆ, ವಿಜಾಪೂರ ಇವರ ಅನುಮತಿಪಡೆಯದೇ ಕೇಂದ್ರ ಸ್ಥಾನವನ್ನು ಬಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1353

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಬೆಂಗಳೂರು ಬಯೋ 2009 ರ ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ವಿಯಇ 55 ವಿತ್ರಮ 2009, ದಿನಾಂಕ: 16–04–2009

2. ಸದಸ್ಯ – ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು. ಇವರ ಏಕ ಕಡತ ಸಂಖ್ಯೆ ವಿತಂಇ/18/ಬಯೋ/2009, ದಿನಾಂಕ: 17/04/2009

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿನ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ, 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0–01(101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಯಾನುದಾನವಾಗಿ ಒಟ್ಟು ರೂ. 340.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಮೆ: ಎಂ. ಎಂ. ಆಕ್ಟಿವ್, ನಂ.9, ಯುಎನ್ಐ ಬಿಲ್ಡಿಂಗ್, ಮೊದಲನೇ ಮಹಡಿ ವಸಂತನಗರ ಬೆಂಗಳೂರು. ಇವರು ಬೆಂಗಳೂರು ಬಯೋ 2009 ರ ಕಾರ್ಯಕ್ರಮವನ್ನು 2009ರ ಜೂನ್ 8 ರಿಂದ 20 ರವರೆಗೆ ದಿ ಲಲಿತ್ ಆಶೋಕ, ಬೆಂಗಳೂರು. ಇಲ್ಲಿ ನಡೆಸಲು ರೂ. 10.00 ಲಕ್ಷಗಳ ಸಹಾಯಾನುದಾನಕೋರಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸದರಿ ಕಾರ್ಯಕ್ರಮ ಹಮ್ಮಿಕೊಳ್ಳಲು ರೂ. 5.00 ಲಕ್ಷಗಳನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (2) ರಲ್ಲಿನ ಏಕ ಕಡತದಲ್ಲಿ ಸದಸ್ಯ–ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 63 ವಿತ್ರಮ 2009, ಬೆಂಗಳೂರು, ದಿನಾಂಕ: 12ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಪ್ರಾಯೋಜಕರು, ಮೆ: ಎಂ.ಎಂ. ಆಕ್ಟಿವ್, ನಂ.9, ಯು.ಎನ್.ಐ ಬಿಲ್ಡಿಂಗ್. ಮೊದಲನೇ ಮಹಡಿ, ವಸಂತನಗರ, ಬೆಂಗಳೂರು ಇವರು ಬೆಂಗಳೂರು ಬಯೋ 2009ರ ಕಾರ್ಯಕ್ರಮವನ್ನು 2009ರ ಜೂನ್ 18 ರಿಂದ 20ರ ವರೆಗೆ ಬೆಂಗಳೂರಿನಲ್ಲಿ ನಡೆಸಲು **ಸದಸ್ಯ– ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು** ಇವರಿಗೆ ರೂ. 5.00 ಲಕ್ಷ (ರೂಪಾಯಿ ಐದು ಲಕ್ಷಗಳು ಮಾತ್ರ) ಗಳನ್ನು ಈ ಕೆಳಕಂಡ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ.

1. ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದಲ್ಲಿನ ಲೆಕ್ಕ ಶೀರ್ಷಿಕೆ 3425–60–200–0–01(101) (ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.
2. ಈ ಮೊತ್ತವನ್ನು ಸದಸ್ಯ–ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು ಇವರು ಖಜಾನೆಯಿಂದ ಪಡೆದು ಮೇಲ್ಕಾಣಿಸಿದ ಕಾರ್ಯಕ್ರಮಕ್ಕಾಗಿ ಮೆ: ಎಂ. ಎಂ. ಆಕ್ಟಿವ್ ಸಂಸ್ಥೆಗೆ ಪಾವತಿಸತಕ್ಕದ್ದು.
3. ಈ ಮೇಲಿನ ಅನುದಾನವನ್ನು ಖರ್ಚು ಮಾಡಿದ ಬಗ್ಗೆ ಸಂಸ್ಥೆಯು ಉಪಯೋಗತಾ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕ ಪತ್ರಗಳನ್ನು ಕಾರ್ಯಕ್ರಮ ಮುಗಿದ ತಕ್ಷಣ ಸಲ್ಲಿಸತಕ್ಕದ್ದು.
4. ಬಿಡಗಡೆ ಮಾಡಿದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ / ಕಾರ್ಯಕ್ರಮಗಳಿಗೆ ಸರ್ಕಾರದ ಅನುಮತಿ ಇಲ್ಲದೆ ವರ್ಗಾಯಿಸಬಾರದು.
5. ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದೇ ಇದ್ದದ್ದು ಕಂಡು ಬಂದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕ್ ನೀಡುವ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮಕೈಗೊಳ್ಳಲಾಗುವುದು.
6. ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಮತ್ತು ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಹಿಂತೆಗೆದುಕೊಳ್ಳಲು ಕ್ರಮ ತೆಗೆದುಕೊಳ್ಳಲಾಗುವುದು.
7. ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16/5/2008 ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಪಿ.ಆರ್. 1354

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** 12ನೇ ಹಣಕಾಸು ಯೋಜನೆ ಅಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಅರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಟಿಟಿಎಂ/ಹ.ಹ.ಕಾ.ಆಯೋಗ/2009 ದಿನಾಂಕ:02/05/2009

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 02/05/2009 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, 2009–10 ನೇ ಸಾಲಿಗೆ 12 ನೇ ಆರ್ಥಿಕ ಹಣಕಾಸು ಯೋಜನೆ ಅಡಿಯಲ್ಲಿ ಅನುಮೋದಿಸಲಾಗಿರುವ ಒಟ್ಟು ರೂ 25.00 ಕೋಟಿಗಳನ್ನು ಪೊಲೀಸ್ ಆಡಳಿತ ಸುಧಾರಣೆಗಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರೀಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ:07:ಪಿಎಫ್‌ಎಸ್:2009(ಭಾಗ), ಬೆಂಗಳೂರು, ದಿನಾಂಕ: 27ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 12ನೇ ಹಣಕಾಸು ಯೋಜನೆ ಅಡಿಯಲ್ಲಿ ಪೊಲೀಸ್ ಆಡಳಿತದ ಸುಧಾರಣೆಗಾಗಿ 2009–10ನೇ ಸಾಲಿಗೆ ರೂ 25.00 ಕೋಟಿಗಳನ್ನು (ಇಪ್ಪತ್ತೈದು ಕೋಟಿ ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಉಪಯೋಗಿಸಿಕೊಳ್ಳಲು ಸರ್ಕಾರವು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

1. ಈ ಮೊತ್ತವನ್ನು ಕ್ರಿಯಾ ಯೋಜನೆಯಲ್ಲಿನ ಅನುಮೋದಿತ ಅಂಶಗಳಿಗೆ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದು.
2. ಸದರಿ ಅನುದಾನದ ಬಳಕೆ ಕುರಿತು ಕಾಲಮಿತಿ ಅವಧಿಯಲ್ಲಿ ತ್ರೈಮಾಸಿಕ ಪ್ರಗತಿ ಪ್ರಮಾಣ ಪತ್ರಗಳನ್ನು ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶಕ್ಕೆ ಸಲ್ಲಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–800–0–11–ಯೋಜನೇತರ ಇದರಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:28:ಆಆಕೋ:09 ದಿನಾಂಕ:20/05/2009ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1364 **ಬಿ.ಎಂ. ಲಕ್ಷ್ಮಿನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದುಪಡ್ಡಿ**

**ಸಂಖ್ಯೆ ಆಕುಕ 184 ಎಂಎಸ್‌ಎಸ್ 2008, ಬೆಂಗಳೂರು, ದಿನಾಂಕ: 20ನೇ ಮೇ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 184 ಎಂಎಸ್‌ಎಸ್ 2008, ದಿನಾಂಕ 19–05–2009ರ 7ನೇ ಸಾಲಿನಲ್ಲಿ "ಅಪರ ನಿರ್ದೇಶ್ಕರು, (ಉಪ ಯೋಜನಾಡಳಿತಾಧಿಕಾರಿ), ಕೆ.ಹೆಚ್.ಎಸ್.ಡಿ.ಆರ್.ಪಿ. ಬೆಂಗಳೂರು, ಈ ಹುದ್ದೆಗೆ ನೇಮಿಸಿದೆ" ಎಂದಿರುವುದನ್ನು "ಡಾ.ವಿ.ಡಿ.ಹಳಕಟ್ಟಿ, ಜಂಟಿ ನಿರ್ದೇಶಕರು, ಕೆ.ಹೆಚ್.ಎಸ್.ಡಿಆರ್.ಪಿ., ಬೆಂಗಳೂರು, ಇವರು ಕಾರ್ಯನಿರ್ವಹಿಸುತ್ತಿರುವ ಹುದ್ದೆಯನ್ನು ಅಪರ ನಿರ್ದೇಶಕರು (ಉಪ ಯೋಜನಾಡಳಿತಾಧಿಕಾರಿ) ಕೆ.ಹೆಚ್.ಎಸ್.ಡಿ.ಆರ್.ಪಿ., ಬೆಂಗಳೂರು, ಎಂದು ಗುರುತಿಸಿ ಈ ಹುದ್ದೆಗೆ ನೇಮಿಸಿದೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 1332 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಕೋಲಾರದಲ್ಲಿ ವಿಟಿಡಿ 179 ನ್ನು ಸ್ಥಳಾಂತರಿಸುವ ಸಂಬಂಧ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ವರವು ಮತ್ತು ಖುದಾಪುರ ಕಾವಲುಗಳಲ್ಲಿ 4290 ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ರವರ ಪತ್ರ ಸಂಖ್ಯೆ: ಎಲ್ಎನ್‌ಡಿ:ಸಿಆರ್:178:07–08 ದಿನಾಂಕ:6/15/12–2008.

**ಪ್ರಸ್ತಾವನೆ:**

ನಾಗರೀಕ ವಿಮಾನಯಾನ ಮತ್ತು ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ ರಕ್ಷಣಾ ಸಚಿವಾಲಯ ಭಾರತ ಸರ್ಕಾರವು ಬೆಂಗಳೂರಿನಲ್ಲಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಪ್ರಾರಂಭವಾದ ಹಿನ್ನೆಲೆಯಲ್ಲಿ 179 ವಿಓಡಿನ್ನು ಕೋಲಾರದಿಂದ ಹೊಸ ಪ್ರದೇಶಕ್ಕೆ ಸ್ಥಳಾಂತರಿಸಲು ತೀರ್ಮಾನಿಸಿರುತ್ತದೆ ಅಲ್ಲದೆ ಬೃಹತ್ ಸಂಶೋಧನಾ ಮತ್ತು ರಕ್ಷಣಾ ಕೇಂದ್ರ ಹಾಗೂ 3 ಕಿ. ಲೋಮೀಟರ್ ಉದ್ದದ ವಿಮಾನ ಹಾರಾಟದ ವ್ಯವಸ್ಥೆಯನ್ನು ರೂ.850 ರಿಂದ ರೂ 900 ಕೋಟಿ ಬಂಡವಾಳ ಹೂಡಿಕೆಯೊಂದಿಗೆ ಪ್ರಾರಂಭಿಸಲಿದ್ದು ಇದಕ್ಕೆ ಸುಮಾರು 4300 ಎಕರೆ ಜಮೀನಿನ ಅವಶ್ಯಕತೆ ಇರುತ್ತದೆ. ಈ ಬೃಹತ್ ಯೋಜನೆಯ ಅನುಷ್ಠಾನದ ಸಂಬಂಧ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯು ವಿಮಾನ ನಿಲ್ದಾಣ ಪ್ರಾಧಿಕಾರದ ಸಹಾಯೋಗದೊಂದಿಗೆ ಮತ್ತು ಮಹಾ ನಿರ್ದೇಶಕರು ವಿಮಾನಯಾನ ಮಂತ್ರಾಲಯದೊಂದಿಗೆ ಮೇಲ್ಕಂಡ ಯೋಜನೆಯ ಅನುಷ್ಟಾನದ ಸಂಬಂಧ ಸೂಕ್ತ ಜಮೀನಿನ ಸಮೀಕ್ಷೆ ನಡೆಸಿದೆ. ಚಿತ್ರದುರ್ಗ ಜಿಲ್ಲೆಯ, ಚಳ್ಳಕೆರೆ ತಾಲೂಕಿನ ವರವು ಹಾಗೂ ಖುದಾಪುರ ಕಾವಲುಗಳಲ್ಲಿ 4200 ಎಕರೆ ಜಮೀನನ್ನು ಜಂಟಿ ಮೋಜಿಣಿ ಮಾಡಿ ಗುರುತಿಸಲಾಗಿದೆ.

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕು ಕುರಿ ಸಾಕಾಣಿಕೆ ಸಂವರ್ಧನಾ ಕೇಂದ್ರವು ಕುರಿ ಮತ್ತು ಉಣ್ಣೆ ಕೈ ಮಗ್ಗ ಅಭಿವೃದ್ಧಿ ನಿಗಮ ಬೆಂಗಳೂರಿನ ಆಡಳಿತಾತ್ಮಕ ನಿಯಂತ್ರಣದಲ್ಲಿರುತ್ತದೆ. ವರವು ಕಾವಲ್ ಗ್ರಾಮದ ಸ.ನಂ.343 ರಲ್ಲಿ ಒಟ್ಟು 6893.13 ಎಕರೆ ಹಾಗೂ ಕುದಾಪುರ ಕಾವಲ್‌ನ ಸ. ನಂ. 47 ರಲ್ಲಿ ಒಟ್ಟು 2819.23 ಎಕರೆ ಇರುತ್ತದೆ ಈ ಪೈಕಿ ವರವು ಕಾವಲ್‌ನಲ್ಲಿ 4000 ಎಕರೆ ಹಾಗೂ ಖುದಾಪುರ ಕಾವಲ್‌ನಲ್ಲಿ 200 ಎಕರೆ ಜಮೀನನ್ನು ಉದ್ದೇಶಿತ ಯೋಜನೆಗೆ ಗುರ್ತಿಸಲಾಗಿದೆ. ಯೋಜಿತ ಉದ್ದೇಶಕ್ಕೆ ಜಮೀನು ಮಂಜೂರಾತಿಗೆ ಗ್ರಾಮಸ್ಥರ ಸಹಮತವಿರುತ್ತದೆ ಮುಂದುವರಿದು ಪ್ರಸ್ತಾಪಿತ ಜಮೀನಿಗೆ ಕೂಡು ರಸ್ತೆಯ ಅವಶ್ಯಕತೆ ಇರುವ ಕಾರಣ 50 ಮೀಟರ್ ಅಗಲದ ಜಮೀನನ್ನು ಖುದಾಪುರ ಕಾವಲ್‌ನ ಸ.ನಂ. 47 ರಲ್ಲಿ ಒದಗಿಸಲು ಡಿಆರ್‌ಡಿಓ ರವರು ಕೋರಿದ್ದು ಈ ಉದ್ದೇಶಕ್ಕೆ ಹೆಚ್ಚುವರಿಯಾಗಿ ಅಂದಾಜು 90 ಎಕರೆ ಜಮೀನಿನ ಅವಶ್ಯಕತೆ ಇರುತ್ತದೆ ಎಂಬುದಾಗಿ ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಪತ್ರದಲ್ಲಿ ವರದಿ ಮಾಡಿದ್ದಾರೆ.

ಉಪ ನಿರ್ದೇಶಕರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಚಿತ್ರದುರ್ಗ ರವರ ವರದಿಯಂತೆ ಕಾವಲ್‌ನ ಸುತ್ತಮುತ್ತಲಿನ ಗ್ರಾಮದ ಜಾನುವಾರುಗಳು ಕಾವಲಿನಲ್ಲಿ ಮೇಯಲು ಅವಕಾಶವಿರುವುದಿಲ್ಲ ಪಾಶುಪಾಲಕರು ಅವರ ರಾಸುಗಳನ್ನು ಅವರದೇ ಜಮೀನಿನಲ್ಲಿ, ಗೋಮಾಳಗಳಲ್ಲಿ ಮತ್ತು ಅರಣ್ಯ ಪ್ರದೇಶಗಳಲ್ಲಿ ಮೇಯಿಸಿಕೊಳ್ಳುತ್ತಿದ್ದು ಕುರಿ ಸಂವರ್ಧನಾ ಕೇಂದ್ರಕ್ಕೆ ಸೇರಿರುವ 823 ಜಾನುವಾರುಗಳಿಗೆ 177 ಎಕರೆ ಜಮೀನಿನ ಅವಶ್ಯಕತೆ ಇರುವುದಾಗಿ ತಿಳಿದುಬರುತ್ತದೆ. ಅಮೃತ್ ಮಹಲ್ ಕಾವಲ್ ಜಮೀನುಗಳಲ್ಲಿ ಮೇವು ಅಭಿವೃದ್ಧಿಯ ಯಾವುದೇ ಯೋಜನೆಗಳು/ ಕಾರ್ಯಗಳು ನಡೆಯುತ್ತಿರುವುದಿಲ್ಲ ಪ್ರಸ್ತುತ ಕಾವಲ್ ಜಮೀನುಗಳು ಪಶುಸಂಗೋಪನಾ ಇಲಾಖೆಯ ರಕ್ಷಣೆಯಲ್ಲಿದ್ದಾಗ್ಯೂ ಯೋಜಿತ ಉದ್ದೇಶಕ್ಕೆ ಬಹುತೇಕ ಜಮೀನುಗಳ ಬಳಕೆಯಾಗುತ್ತಿಲ್ಲ ಹಾಗೂ ಈ ಜಮೀನುಗಳಲ್ಲಿ ಅನಧಿಕೃತ ಸಾಗುವಳಿ ಅನಧಿಕೃತ ಗಣಿಗಾರಿಕೆ ಹಾಗೂ ಒತ್ತುವರಿ ತಡೆಯಲು ಯೋಜಿತ ಯೋಜನೆಗೆ ಪ್ರಸ್ತಾಪಿತ ಜಮೀನನ್ನು ಶಿಫಾರಸ್ಸು ಮಾಡಲಾಗಿದೆ ಎಂದು ಜಿಲ್ಲಾಧಿಕಾರಿಗಳು ಚಿತ್ರದುರ್ಗ ರವರು ಅಭಿಪ್ರಾಯ ನೀಡಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ: 14 ಎಲ್‌ಜಿಪಿ:2008, ಬೆಂಗಳೂರು ದಿನಾಂಕ: 21ನೇ ಮೇ 2009**

ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರ ಅಧಿಕಾರ ಚಲಾಯಿಸಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ವರವು ಕಾವಲ್ ಸ.ನಂ. 343 ರಲ್ಲಿನ 400 ಎಕರೆ ಮತ್ತು ಖುದಾಪುರ ಕಾವಲ್ ಸ.ನಂ.47ರಲ್ಲಿ 290 ಎಕರೆ ಒಟ್ಟಾರೆ 4290 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ. 30,000/– (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ವಿಧಿಸಿ, ಡಿಆರ್‌ಡಿಓ ರಕ್ಷಣಾ ಸಂಸ್ಥೆಯು ಎರಡು ವರ್ಷದೊಳಗಾಗಿ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪ್ರಗತಿ ಸಾಧಿಸುವ ಷರತ್ತಿಗೊಳಪಟ್ಟು ಡಿಆರ್‌ಡಿಓ ರಕ್ಷಣಾ ಮಂತ್ರಾಲಯ ಕೇಂದ್ರ ಸರ್ಕಾರ ರವರಿಗೆ ಮಂಜೂರು ಮಾಡಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕಾ ಇಲಾಖೆ(ಪಶುಸಂಗೋಪನೆ) ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಪಸಂಮಿ:29ಕಕಮ:2008 ದಿನಾಂಕ:19–12–2008 ಮತ್ತು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ:1630: ಇಎಕ್ಸ್‌ಪಿ–7:2008 ದಿನಾಂಕ:3–12–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1370

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2008–09 ನೇ ಸಾಲಿಗೆ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 30 ಅಡವಿ 2009 ದಿನಾಂಕ 12–05–09,

2. ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರ ಪತ್ರ ಸಂಖ್ಯೆ ಕೆಬಿಟ್ಸ್ /ಎಸಿಟಿ/2009–10,ದಿ:21–5–2009.

**ಪ್ರಸ್ತಾವನೆ:**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–01ಮಾಹಿತಿ ತಂತ್ರಜ್ಞಾನ–ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ. 920.00 ಲಕ್ಷಗಳ ಅನುದಾನವು ಒದಗಣೆಯಾಗಿದ್ದು, ಅದರಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ರೂ. 80.00 ಲಕ್ಷ [ರೂ. ಎಂಬತ್ತು ಲಕ್ಷಗಳು ಮಾತ್ರ] ಗಳ ಅನುದಾನವನ್ನು ಮೇಲೆ [1] ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರು ಮೇಲೆ (2) ರಲ್ಲಿ ಓದಲಾದ ದಿನಾಂಕ 21–5–2009ರ ಪತ್ರದಲ್ಲಿ ಕೆಬಿಟ್ಸ್ ಸಂಸ್ಥೆಯಲ್ಲಿನ ಅಧಿಕಾರಿಗಳ ಹಾಗೂ ಸಿಬ್ಬಂದಿಯವರ ಸಂಬಳ, ಇಂಧನ ವೆಚ್ಚ, ಅತಿಥ್ಯ ವೆಚ್ಚಗಳು, ಕಛೇರಿಯ ಉಪಕರಣಗಳು, ಕಾಗದ ಇತ್ಯಾದಿ ಖರ್ಚುಗಳು ನಿರ್ವಹಿಸುವ ಸಂಬಂಧ ರೂ. 40.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪ್ರಸ್ತುತ ರೂ. 40.00 ಲಕ್ಷಗಳ ಅನುದಾನವನ್ನು ಮೊದಲನೆಯ ಕಂತಾಗಿ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ37 ಅಡವಿ 2007, ಬೆಂಗಳೂರು, ದಿನಾಂಕ: 30ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 40.00 ಲಕ್ಷಗಳ ಅನುದಾನವನ್ನು 2009–10ನೇ ಸಾಲಿನ ಮೊದಲನೆಯ ಕಂತಾಗಿ, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಗೆ ನೀಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ವೆಚ್ಚ (ಯೋಜನೆ)'** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16–05–2008 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1371 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ:** ಐ.ಟಿ.ಐ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಹೆಚ್‌ಎಸ್‌ಜಿ–2/260/ಹೆಚ್‌ಹೆಚ್‌ಎಸ್/2008–09 ದಿನಾಂಕ:31–03–2009.

**ಪ್ರಸ್ತಾವನೆ:**

ಐ.ಟಿ.ಐ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ 2007–08 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸುವ ಅವಧಿಯನ್ನು ದಿನಾಂಕ:31–03–2009 ರವರೆಗೆ ಇಲಾಖಾ ಸಕ್ಷಮ ಪ್ರಾಧಿಕಾರವಾದ ಸಹಕಾರ ಸಂಘಗಳ ಜಂಟಿ ನಿಬಂಧಕರು ವಿಸ್ತರಿಸಿದ್ದು 15ನೇ ಲೋಕಸಭಾ ಚುನಾವಣೆಗಳನ್ನು ನಡೆಸುವ ಅಧಿಸೂಚನೆ ಹೊರಬಿದ್ದ ಕಾರಣ ಹಾಗೂ ಮಾರ್ಚ್ ಮಾಹೆಯ ಅಂತ್ಯವು ಐ.ಟಿ.ಐ ಕಾರ್ಖಾನೆಯ ಉತ್ಪಾದನಾ ಅವಧಿಯಾದ ಕಾರಣ ಸಂಘದ ಸದಸ್ಯರೆಲ್ಲರೂ ಪೂರ್ಣ ಮಟ್ಟದಲ್ಲಿ ಮಹಾಸಭೆಯಲ್ಲಿ ಪಾಲ್ಗೊಳ್ಳಲು ಅನುಕೂಲ ಕಲ್ಪಿಸುವ ಹಿತ ದೃಷ್ಟಿಯಿಂದ ಸಂಘದ 2007–08 ನೇ ಸಾಲಿನ ಮಹಾಸಭೆಯನ್ನು ನಡೆಸಲು ದಿನಾಂಕ:01–04–2009 ರಿಂದ 3 ತಿಂಗಳು ಅವಧಿಯನ್ನು ವಿಸ್ತರಿಸಲು ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 68 ಸಿಎಲ್ಎಂ 2009, ಬೆಂಗಳೂರು, ದಿನಾಂಕ: 19ನೇ ಮೇ 2009**

ಪ್ರಸ್ತಾವನೆಯಲ್ಲಿ ವಿಸರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 12 ರಡಿಯಲ್ಲಿ ಪ್ರದತತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಐ.ಟಿ.ಐ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ 2007–08 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:30.06.2009 ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 27 ಸದರಿ ಸಂಸ್ಥೆಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ,**

27ನೇ ಪ್ರಕರಣ ಉಪಪ್ರಕರಣ(1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಒಂಬತ್ತು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30.06.2009 ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1) ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1372

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ & ಇತರೆ) ಇವರ ಪತ್ರ ಸಂಖ್ಯೆ: ಹೆಚ್ಎಸ್ಜಿ–2/244/ಹೆಚ್ಹೆಚ್ಎಸ್/2008–09, ದಿನಾಂಕ:19.03.2009.

**ಪ್ರಸ್ತಾವನೆ:**

ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸುವ ಅವಧಿಯನ್ನು ದಿನಾಂಕ:31.03.2009 ರವರೆಗೆ ಇಲಾಖಾ ಸಕ್ಷಮ ಪ್ರಾಧಿಕಾರವಾದ ಸಹಕಾರ ಸಂಘಗಳ ಜಂಟಿ ನಿಬಂಧಕರು ವಿಸ್ತರಿಸಿರುತ್ತಾರೆ. ಸಂಘದಲ್ಲಿ ತೀವ್ರತರವಾದ ಹಣದ ಮುಗ್ಗಟ್ಟು ಇರುವ ಕಾರಣ ನಿಗದಿತ ಅವಧಿಯೊಳಗೆ ಮಹಾಸಭೆಯನ್ನು ನಡೆಸಲು ತೊಂದರೆ ಉಂಟಾಗಿರುವುದರಿಂದ ಸದರಿ ಸಂಘಕ್ಕೆ 2007–08 ನೇ ಸಾಲಿನ ಮಹಾಸಭೆಯನ್ನು ನಡೆಸಲು ದಿನಾಂಕ:30.09.2009 ರವರೆಗೆ ಅವಧಿ ವಿಸ್ತರಿಸಲು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸು ಮಾಡಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಸಿಒ64 ಸಿಎಲ್ಎಂ 2009, ಬೆಂಗಳೂರು, ದಿನಾಂಕ: 19ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ 2007–08 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:30.09.2009 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 ಸದರಿ ಸಂಸ್ಥೆಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ,**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2009 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1373

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ತಳಗವಾದಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಅಧ್ಯಕ್ಷರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ತಳಗವಾಡಿ, ಮಳವಳ್ಳಿ ತಾಲ್ಲೂಕು. ಇವರ ಪತ್ರ ದಿನಾಂಕ:11.03.2009.
2. ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು) ಇವರ ಪತ್ರ ಸಂಖ್ಯೆ: ಸಿ. ಆರ್ ಡಿ/172/ಕೆಎಂಈ–5/2008–09, ದಿನಾಂಕ: 31.03.2009.

**ಪ್ರಸ್ತಾವನೆ:**

ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ತಳಗವಾದಿ ಇದರ 2007–08 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ:31.03.2009 ರವರೆಗೆ ಮುಂದೂಡಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಡ್ಯ ಉಪವಿಭಾಗ ಇವರು ಅನುಮತಿ ನೀಡಿದ್ದು ಕೇಂದ್ರ ಚುನಾವಣಾ ಆಯೋಗವು ಲೋಕಸಭಾ ಚುನಾವಣಾ ವೇಳಾ ಪಟ್ಟಿಯನ್ನು ಬಿಡುಗಡೆ ಮಾಡಿರುವುದರಿಂದ ಸಂಘದ ವ್ಯಾಪ್ತಿಯ ಗ್ರಾಮಗಳ ಸದಸ್ಯರು ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿರುವುದರಿಂದ ಸದರಿ ಸಾಲಿನ ಮಹಾಸಭೆಯನ್ನು ಮುಂದೂಡಲು ಅನುಮತಿಯನ್ನು ನೀಡುವಂತೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ತಳಗವಾದಿ ಇದರ ಅಧ್ಯಕ್ಷರು ಮೇಲೆ ಓದಲಾದ (1)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು) ಇವರು ಸಂಘದ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಸೆಪ್ಟೆಂಬರ್ 2009 ರೊಳಗೆ ನಡೆಸಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಂಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ67 ಸಿಎಲ್ಎಂ 2009, ಬೆಂಗಳೂರು, ದಿನಾಂಕ: 19ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಮಯ 1959 ಪ್ರಕರಣ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ತಳಗವಾದಿ ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:30–09–2009 ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಮಯ 1959 ರ ಪ್ರಕರಣ 27 ಸದರಿ ಸಂಸ್ಥೆಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ,**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30.09.2009 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1374

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ಕೃಷಿ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ಬೀಜ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿ ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ : ಕೃತೋಇ 268 ಕೃಪಸೇ 2008, ದಿನಾಂಕ: 2–1–2009

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಬೀಜ ನಿಗಮವು ರಾಜ್ಯ ರೈತರಿಗೆ ಉತ್ತಮ ಗುಣಮಟ್ಟದ ಬಿತ್ತನೆ ಬೀಜವನ್ನು ಒದಗಿಸುವಲ್ಲಿ ಅತ್ಯಂತ ಪ್ರಮುಖ ಸಾರ್ವಜನಿಕ ಸಂಸ್ಥೆಯಾಗಿರುತ್ತದೆ. ಕೇಂದ್ರ ಪುರಸ್ಕೃತ ಯೋಜನೆಗಳಾದ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ರಾಷ್ಟ್ರೀಯ ಆಹಾರ ಭದ್ರತಾ ಮಿಸನ್ ಪ್ರಧಾನ ಮಂತ್ರಿಗಳ ಪುನರ್ವಸತಿ ಪ್ಯಾಕೇಜ್, ಐಸೋಪಾಮ್ (ISOPOM), ಇತ್ಯಾದಿ ಯೋಜನೆಗಳಲ್ಲಿ ಉತ್ತಮ ಗುಣ ಮಟ್ಟದ ಬಿತ್ತನೆ ಬೀಜದ ಸರಬರಾಜಿಗೆ ಅತಿ ಪ್ರಾಮುಖ್ಯತೆಯನ್ನು ನೀಡಿರುವುದಲ್ಲದೆ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಪ್ರಾಮಾಣಿಕರಿಸಿದ ಬಿತ್ತನೆ ಬೀಜ ಸರಬರಾಜಿಗೆ ಹಾಗೂ ಬೀಜೋತ್ಪಾದನೆಗೆ ಹೆಚ್ಚಿನ ಒತ್ತು ನೀಡುತ್ತಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಬೀಜ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ನಿರ್ದೇಶಕರ ಸ್ಥಾನಮಾನಕ್ಕೆ ಉನ್ನತ್ತೀಕರಿಸಿ ಕೃಷಿ ನಿರ್ದೇಶಕರ ಸ್ಥಾನಮಾನದ ಅಧಿಕಾರಿಯನ್ನು ನೇಮಿಸುವುದು ಅತ್ಯಂತ ಅವಶ್ಯಕವಿರುವುದಾಗಿ ಮನಗಂಡು ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ರಾಜ್ಯ ಬೀಜ ನಿಗಮದ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ನಿರ್ದೇಶಕರ ಸ್ಥಾನಮಾನಕ್ಕೆ ಉನ್ನತ್ತೀಕರಿಸಿ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 32 ಎಸ್‌ಆರ್‌ಇ 98, ದಿನಾಂಕ:01–01–2000 ರನ್ವಯ ಕರ್ನಾಟಕ ಕೃಷಿ ಸೇವೆಗಳ (ನೇಮಕಾತಿ) ನಿಯಮಗಳು 1999ರನ್ವಯ ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ನಿರ್ದೇಶಕ ವೃಂದ ಬಲಕ್ಕೆ ಸೇರ್ಪಡೆ ಮಾಡುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕೃತೋಇ 268 ಕೃಪಸೇ 2008, ಬೆಂಗಳೂರು, ದಿನಾಂಕ: 29ನೇ ಮೇ 2009**

ಮೇಲೆ ಓದಲಾದ ಸರ್ಕಾರದ ಆದೇಶ ಸಂಖ್ಯೆ:ಕೃತೋಇ 268 ಕೃಪಸೇ 2008, ದಿನಾಂಕ:2–1–2009ರಲ್ಲಿ ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ನಿರ್ದೇಶಕರ ಸ್ಥಾನಮಾನಕ್ಕೆ ಉನ್ನತ್ತೀಕರಿಸಲಾಗಿದೆ. ಈ ಹುದ್ದೆಯನ್ನು ಕೃಷಿ ನಿರ್ದೇಶಕರ ಹುದ್ದೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡಲು ಆದೇಶಿಸಿದೆ. ಈ ಹಿನ್ನೆಲೆಯಲ್ಲಿ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 35 ಎಆರ್‌ಆರ್ 90, ದಿನಾಂಕ: 1–10–1990ರ ಅನುಸಾರ ಕೃಷಿ ನಿರ್ದೇಶಕರ ಹುದ್ದೆಗೆ ಸಮಾನವಾದ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ಇಲಾಖೆಯ ಕೃಷಿ ನಿರ್ದೇಶಕರ ವೃಂದಕ್ಕೆ ತಾತ್ಕಾಲಿಕ ಸೇರ್ಪಡೆಯೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1377

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ

**ವಿಷಯ:** ಶ್ರೀ ಎನ್.ಕೆ.ಮುರಳಿ, ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಆಯುಕ್ತರ ಕಚೇರಿ, ಬೆಂಗಳೂರು ಇವರು ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ:** 1) ಕೃಷಿ ಆಯುಕ್ತರ ಪತ್ರ ಸಂ: ಕೃಷಿಪ–1/61/2008–09 ದಿನಾಂಕ:06–04–2009

**ಪ್ರಸ್ತಾವನೆ:**

ಮೇಲೆ ಓದಲಾದ–(1)ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರೀ ಎನ್.ಕೆ.ಮುರಳಿ, ಸಹಾಯಕ ಕೃಷಿ ನಿರ್ದೇಶಕರು, ರಾಜ್ಯ ಭೂ ಬಳಕೆ ಮಂಡಳಿ, (ಕಾರ್ಯನಿರ್ವಹಣೆ ಆಧಾರ), ಕೃಷಿ ಆಯುಕ್ತರ ಕಚೇರಿ, ಬೆಂಗಳೂರು ಇವರು ಕೌಟುಂಬಿಕ ಕಾರಣಗಳಿಂದಾಗಿ ದಿನಾಂಕ:31–5–2009ರಿಂದ ಜಾರಿಗೆ ಬರುವಂತೆ ಸ್ವ ಇಚ್ಛಾ ನಿವೃತ್ತಿ ಕೋರಿ ಸಲ್ಲಿಸಿರುವ ದಿನಾಂಕ:01.12.2008ರ ಮನವಿಯೊಂದಿಗೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿರುತ್ತಾರೆ ಹಾಗೂ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಬಾಕಿ/ಬೇಬಾಕಿ ಪತ್ರಗಳ ನಿರೀಕ್ಷಣ ಷರತ್ತುಗಳಿಗೊಳಪಟ್ಟು ಸ್ವ–ಇಚ್ಛಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 117 ಕೃಪಸೇ 2009, ಬೆಂಗಳೂರು, ದಿನಾಂಕ: 30ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎನ್.ಕೆ.ಮುರಳಿ, ಸಹಾಯಕ ಕೃಷಿ ನಿರ್ದೇಶಕರು, ರಾಜ್ಯ ಭೂ ಬಳಕೆ ಮಂಡಳಿ (ಕಾರ್ಯನಿರ್ವಹಣೆ ಆಧಾರ), ಕೃಷಿ ಆಯುಕ್ತರ ಕಚೇರಿ, ಬೆಂಗಳೂರು ರವರಿಗೆ ಅವರಿಂದ

ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ:31–05–2009 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 285(1)(ಎ) ಅನ್ವಯ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1378

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ ಕೃಷಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಡಿ.ಬಿ.ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್, ಬೆಳಗಾಂ ಇವರಿಗೆ ಜೀವನಾಧಾರ ಭತ್ಯೆ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ: ಸಿಅಸುಇ 68 ಕೆಇವಿ 08 ದಿ: 28–10–2008

2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್ ಬೆಳಗಾಂ ರವರ ಪತ್ರ ಸಂ:ಜಿಪ/ಸಿಬ್ಬಂದಿ/ ವಿವ–64/08–09 ದಿ:30–12–2008

**ಪ್ರಸ್ತಾವನೆ:**

ಶ್ರೀ ಡಿ.ಬಿ.ನಾಯಕ್ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ. ಹಿಂದಿನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಜಿಲ್ಲಾ ಪಂಚಾಯತ್, ಬೆಳಗಾಂ, ಬೆಳಗಾಂ ಜಿಲ್ಲೆ ಇವರು ತಮ್ಮ ಬಲ್ಲ ಮೂಲಗಳಿಗಿಂತ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ತಿಳಿದು ಬಂದ ಹಿನ್ನೆಲೆಯಲ್ಲಿ ಲೋಕಾಯುಕ್ತ ಪೋಲಿಸರು ಬೆಂಗಳೂರು ಗ್ರಾಮಾಂತರ ಜಿಲ್ಲೆ ಪೋಲಿಸ್ ಠಾಣೆಯಲ್ಲಿ ಮೊಕದ್ದಮೆ ಸಂ:27/2008 ಅನ್ನು ದಾಖಲಿಸಿಕೊಂಡು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 13(1)(ಇ) ಹಾಗೂ 13(2) ರಡಿ ಶ್ರೀ ಡಿ.ಬಿ.ನಾಯಕ್, ಕೆ.ಎ.ಎಸ್. ಇವರ ಮನೆ ಮತ್ತು ಕಛೇರಿಗಳ ಮೇಲೆ ದಿ:11–09–08ರಂದು ದಾಳಿ ನಡೆಸಿ ಇವರ ವಿರುದ್ಧ ಪ್ರಕರಣ ದಾಖಲಿಸಿ ಇವರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತಮ್ಮ ಪ್ರಭಾವವನ್ನು ಬೀರುವುದರ ಮೂಲಕ ಸಾಕ್ಷಾಧಾರಗಳನ್ನು ನಾಶಪಡಿಸಿ ತನಿಖೆಗೆ ಅಡ್ಡಿ ಅಡಚಣೆ ಉಂಟು ಮಾಡುವ ಸಾಧ್ಯತೆಗಳಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅವರ ಸ್ಥಾನವನ್ನು ಪಲ್ಲಟಗೊಳಿಸಲು ಅಪರ ಪೋಲಿಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶಿಫಾರಸ್ಸು ಮಾಡಿದ್ದರು. ಅದರಂತೆ ಮೇಲೆ ಓದಲಾದ ಕ್ರಮ ಸಂ:(1)ರ ಆದೇಶದಲ್ಲಿ ಸದರಿ ಅಧಿಕಾರಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂ:(2)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಳಗಾಂ ರವರು ಸರ್ಕಾರಕ್ಕೆ ಪತ್ರ ಬರೆದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಳಗಾಂ ಹುದ್ದೆಗೆ ಇನ್ನೊಬ್ಬ ಅಧಿಕಾರಿಯನ್ನು ನೇಮಿಸಿರುವುದರಿಂದ ಶ್ರೀ ಡಿ.ಬಿ.ನಾಯಕ್ ಕೆ.ಎ.ಎಸ್. ಇವರ ಜೀವನಾಧಾರ ಭತ್ಯೆಯನ್ನು ಯಾವ ಕಚೇರಿಯಿಂದ ಡ್ರಾ ಮಾಡಿ ಬಟವಾಡೆ ಮಾಡುವ ಬಗ್ಗೆ ಸ್ಪಷ್ಟೀಕರಣ ಕೋರಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಿಆಸುಇ 6 ಕೆಇವಿ 2009, ಬೆಂಗಳೂರು, ದಿನಾಂಕ: 26ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಡಿ.ಬಿ.ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಹಿಂದಿನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಜಿಲ್ಲಾ ಪಂಚಾಯತ್, ಬೆಳಗಾಂ, ಬೆಳಗಾಂ ಜಿಲ್ಲೆ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 98ರ ಪ್ರಕಾರ ಇವರ ಅಮಾನತ್ತಿನ ಆದೇಶ ದಿ:28–10–2008 ರಿಂದ ಈ ಬಗ್ಗೆ ಮುಂದಿನ ಆದೇಶ ಹೊರಡಿಸುವವರೆಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಮಹಾಲೇಖಪಾಲರಿಂದ authorization ಪಡೆದು ಸಿ.ಅ.ಸು. ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಯಿಂದ ಡ್ರಾ ಮಾಡಿ ಬಟವಾಡೆ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂ:ಅಇ 306 ವೆಚ್ಚ 12 2009 ದಿ:16–04–2009 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1379

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಆರ್.ನಾರಾಯಣ್ ಕೆ.ಎ.ಎಸ್. ಅಧಿಕಾರಿ ಹಾಗೂ ಇತರೆ 08 ಜನ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಶ್ರೀ ಆರ್.ನಾರಾಯಣ್ ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ:ಸಿಅಸುಇ 43 ಎಸ್ಇಎನ್ 06 (ಸಿಅಸುಇ 75 ಕೆಇಪಿ 07) ದಿ:28–9–2007.

2. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರ ಪತ್ರ ಸಂ: ಪ್ರಾಅಕ/ಸಿಸಿಎ(ಇ.ವಿ)/ಸಿ.ಆರ್3/07–08 ದಿ:30–01–09

**ಪ್ರಸ್ತಾವನೆ:**

ಶ್ರೀ ಆರ್.ನಾರಾಯಣ್ ಕೆ.ಎ.ಎಸ್. ಅಧಿಕಾರಿ ಹಾಗೂ ಇತರೆ ಸಿಬ್ಬಂದಿಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕು ಕಛೇರಿಯಲ್ಲಿ ಕ್ರಮವಾಗಿ ತಹಸೀಲ್ದಾರ್ ರಾಜಸ್ವ ನಿರೀಕ್ಷಕ ಗ್ರಾಮ ಲೆಕ್ಕಿಗರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹಲವು ಗ್ರಾಮಗಳಲ್ಲಿ ಸರ್ಕಾರಿ ಜಮೀನುಗಳನ್ನು ಕಾನೂನು ಬಾಹಿರವಾಗಿ ಮಂಜೂರು ಮಾಡಿರುವರೆಂಬ ಆರೋಪದ ಸಂಬಂಧ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರನ್ನು ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ನೇಮಿಸಲಾಗಿತ್ತು. ಈ ಮಧ್ಯೆ ವಿಚಾರಣಾಧಿಕಾರಿಗಳಾದ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರು ಮೇಲೆ ಓದಲಾದ ಕ್ರಮ ಸಂ:(2)ರ ಪತ್ರದಲ್ಲಿ ಶ್ರೀ ಆರ್.ನಾರಾಯಣ್, ಕೆ.ಎ.ಎಸ್. ಅಧಿಕಾರಿ ರವರು ದಿ:03–09–2008ರಂದು ನಿಧನ ಹೊಂದಿರುವುದಾಗಿ ತಿಳಿಸುತ್ತಾ ವಿಚಾರಣೆ ಬಗ್ಗೆ ಮುಂದಿನ ನಿರ್ಣಯ ಕೈಗೊಂಡು ತಿಳಿಸುವಂತೆ ಕೋರಿದ್ದಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಆರೋಪಿಯಾದ ಶ್ರೀ ಆರ್.ನಾರಾಯಣ್ ಕೆ.ಎ.ಎಸ್. ಅಧಿಕಾರಿ ರವರು ದಿ:3.09.2008ರಂದು ನಿಧನ ಹೊಂದಿರುವುದರಿಂದ ಹಾಗೂ ಇವರಿಂದ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗದ ಕಾರಣ ಸರ್ಕಾರದ ಸುತ್ತೋಲೆ ಸಂ: ಸಿಅಸುಇ 10 ಸೇಇವಿ 03 ದಿ:12–11–03 ರಲ್ಲಿ ನೀಡಲಾದ ಸ್ಪಷ್ಟೀಕರಣದ ಮೇರೆಗೆ ಪ್ರಕರಣದಲ್ಲಿನ ಆರೋಪಿಯಾದ ಶ್ರೀ ಆರ್.ನಾರಾಯಣ್ ಕೆ.ಎ.ಎಸ್. ಅಧಿಕಾರಿ ಇವರನ್ನು ಮಾನವೀಯತೆ ಆಧಾರದ ಮೇಲೆ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮಾತ್ರ ಕೈ ಬಿಡಲು ನಿರ್ವಹಿಸಲಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ:ಸಿಅಸುಇ 45 ಎಸ್ಇಎನ್ 2005(ಸಿಅಸುಇ 75 ಕೆಇವಿ 2007), ಬೆಂಗಳೂರು,**

**ದಿನಾಂಕ: 26ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iv) ರನ್ವಯ ಸರ್ಕಾರವು ದಿ: ಶ್ರೀ ಆರ್.ನಾರಾಯಣ್ ಕೆ.ಎ.ಎಸ್. ಅಧಿಕಾರಿ ಹಿಂದಿನ ತಹಸೀಲ್ದಾರ್ ಚಿಕ್ಕನಾಯಕನಹಳ್ಳಿ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈ ಬಿಡಲು ಆದೇಶಿಸಿದೆ. ಮುಂದುವರೆದು ಪ್ರಕರಣದಲ್ಲಿನ ಇತರೇ ಆರೋಪಿಗಳಾದ ಶ್ರೀ ಕೆ.ನಾರಾಯಣಸ್ವಾಮಿ. ಹಿಂದಿನ ಪ್ರಥಮ ದರ್ಜೆ ಸಹಾಯಕ, ಶ್ರೀ ಎನ್.ಹೆಚ್.ಸದಾಶಿವರಾವ್, ಹಿಂದಿನ ರಾಜಸ್ವ ನಿರೀಕ್ಷಕ, ಶ್ರೀ ಮಾಹಿಮುದ್ದೀನ್, ಹಿಂದಿನ ರಾಜಸ್ವನಿರೀಕ್ಷಕ, ಶ್ರೀ ಮಹ್ಮದ್‌ಅಲ್ತಫ್‌ಪಾಷಾ, ಹಿಂದಿನ ರಾಜಸ್ವ ನಿರೀಕ್ಷಕ, ಶ್ರೀ ಸಿ. ದೇವೆಗೌಡ, ಹಿಂದಿನ ಗ್ರಾಮ ಲೆಕ್ಕಿಗ, ಶ್ರೀ ಕೆ. ಯಲ್ಲಯ್ಯ, ಹಿಂದಿನ ಗ್ರಾಮ ಲೆಕ್ಕಿಗ, ಶ್ರೀ ಚಿಂತಾಮಣಿ, ಹಿಂದಿನ ಗ್ರಾಮ ಲೆಕ್ಕಿಗ, ಶ್ರೀ ಡಿ.ಶಿವರಾಮಯ್ಯ, ಹಿಂದಿನ ಗ್ರಾಮ ಲೆಕ್ಕಿಗ ತಾಲ್ಲೂಕು ಕಛೇರಿ, ಚಿಕ್ಕನಾಯಕನಹಳ್ಳಿ ಅವರುಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತು ಜಂಟಿ ಇಲಾಖಾ ವಿಚಾರಣೆಯು ಮುಂದುವರೆಯುತ್ತದೆ. ವಿಚಾರಣೆಯನ್ನು ಶೀಘ್ರವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 1380

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ತಿದ್ದೋಲೆ**

**ಸಂಖ್ಯೆ: ಸಿಅಸುಇ 31 ಸಅಸೇ 2009, ಬೆಂಗಳೂರು, ದಿನಾಂಕ: 2ನೇ ಜೂನ್ 2009.**

ಶ್ರೀ ಸುರೇಶ್ ಕಲ್ಲಪ್ಪ ಅಳಗುಂಡಿ, ಮಾನ್ಯ ತೋಟಗಾರಿಕೆ ಹಾಗೂ ಬಂಧೀಖಾನೆ ಸಚಿವರ ಆಪ್ತ ಕಾರ್ಯದರ್ಶಿ ಇವರ ಗುತ್ತಿಗೆ ಆಧಾರದ ನೇಮಕಾತಿಯ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸಿ ಹೊರಡಿಸಲಾದ ಆದೇಶ ಸಂಖ್ಯೆ ಸಿಆಸುಇ 31 ಸಅಸೇ 2009, ದಿನಾಂಕ 16–5–2009ರ ಆದೇಶ ಭಾಗದ ಕಂಡಿಕೆ 3ನ್ನು ದಿನಾಂಕ 16–5–2009ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

**ವೇತನ ಮತ್ತು ಇತರೆ ಭತ್ಯೆಗಳು :** ಶ್ರೀ ಸುರೇಶ್ ಕಲ್ಲಪ್ಪ ಅಳಗುಂಡಿ ಇವರು ಒಪ್ಪಂದದ ನೇಮಕಾತಿಯ ಅವಧಿಯಲ್ಲಿ ಅವರ ಮಾತೃ ಇಲಾಖೆಯಲ್ಲಿ ಪಡೆಯುತ್ತಿದ್ದ ವೇತನ, ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆ

ಹಾಗೂ ಸಚಿವರ ಆಪ್ತ ಶಾಖೆಯಲ್ಲಿ ಸದರಿ ಹುದ್ದೆಗೆ ನಿಗಧಿಪಡಿಸಿರುವ ವಿಶೇಷ ವೇತನವನ್ನು ಪಡೆಯಲು ಅರ್ಹರಿರುತ್ತಾರೆ, ಆದರೆ ನೌಕರರು ನಿಯೋಜನೆಯ ಭತ್ಯೆ, ನಗರ ಪರಿಹಾರ ಭತ್ಯೆ, ಅನ್ಯ ಸೇವಾ ಭತ್ಯೆ ಅಥವಾ ಇನ್ನಾವುದೇ ಊಟದ ಭತ್ಯೆ, ಹೆಚ್ಚಿನ ಕಾಲದ ಭತ್ಯೆ, ಬೋನಸ್, ಅನುಗ್ರಹಪೂರ್ವ ಭತ್ಯೆ ಪಡೆಯಲು ಅರ್ಹರಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1387 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಯೋಇ 33 ಹೈಕಮಂ 2009, ಬೆಂಗಳೂರು, ದಿನಾಂಕ: 2ನೇ ಜೂನ್ 2009.**

ಸರ್ಕಾರಿ ಆದೇಶ ಸಂಖ್ಯೆ: ಯೋಇ 33 ಹೈಕಮಂ 2009 ದಿನಾಂಕ: 30–05–2009ರ ಸರ್ಕಾರದ ನಡುವಳಿಯ ಆದೇಶ ಭಾಗದ ಮೊದಲ ಸಾಲಿನಲ್ಲಿ **"ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ"**ಗೆ ಬದಲಾಗಿ **"ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**ಬಿ. ಚಿಕ್ಕರಾಜು**

ಪಿ.ಆರ್. 1388 ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ವಿಷಯ:** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2009–10ನೇ ಸಾಲಿನಲ್ಲಿ ಮೊದಲನೇ ಕಂತಾಗಿ ರೂ.300.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ: ಮಪ್ರಮಂ:ಶಿ:ನಗದು:ಹ:ಬಿ: 2009–10:98 ದಿನಾಂಕ 18–05–2009.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–05 (ಯೋಜನೆ)" ಅಡಿಯಲ್ಲಿ ರೂ.1600.00 ಲಕ್ಷಗಳನ್ನು ಒದಗಿಸಿದ್ದು, ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಬಾಕಿ ಇರುವ ಬಿಲ್ಲುಗಳನ್ನು ಇತ್ಯರ್ಥ ಪಡಿಸಲು ಅನುಕೂಲವಾಗುವಂತೆ ಮಂಡಳಿಗೆ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಆದುದರಿಂದ ಮಂಡಳಿಗೆ ಮೊದಲನೇ ಕಂತಾಗಿ ರೂ.300.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 8 ಮಪ್ರಮಂ 2009 ಬೆಂಗಳೂರು, ದಿನಾಂಕ: 30ನೇ ಮೇ 2009**

2009–10ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಮೊದಲನೇ ಕಂತಾಗಿ ಲೆಕ್ಕಶೀರ್ಷಿಕೆ "2515–00–800–0–05–101 (ಸಹಾಯಾನುದಾನ)(ಯೋಜನೆ)" ಅಡಿಯಲ್ಲಿ ರೂ.300.00 ಲಕ್ಷಗಳನ್ನು (ಮುನ್ನೂರು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2009–10ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ 1 ಟಿಎಫ್‌ಪಿ 2008 ದಿನಾಂಕ 16–5–2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 1389 ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ವಿಷಯ:** ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ 2009–10ನೇ ಸಾಲಿನಲ್ಲಿ ಮೊದಲನೇ ಕಂತಾಗಿ ರೂ 400.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ: ಹೆಚ್‌ಕೆಡಿಬಿ: ಲೇಶಾ/2009–10, ದಿನಾಂಕ: 29–05–2009.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–01–(ಯೋಜನೆ)" ಅಡಿಯಲ್ಲಿ ರೂ.2100.00 ಲಕ್ಷಗಳನ್ನು ಒದಗಿಸಿದ್ದು, ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಮೊದಲನೇ ಕಂತಿನ ಹಣವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಆದುದರಿಂದ, ಮಂಡಳಿಗೆ ಮೊದಲನೇ ಕಂತಾಗಿ ರೂ.400.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 33 ಹೈಕಮಂ 2009, ಬೆಂಗಳೂರು, ದಿನಾಂಕ: 30ನೇ ಮೇ 2009**

2009–10ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಮೊದಲನೇ ಕಂತಾಗಿ ಲೆಕ್ಕಶೀರ್ಷಿಕೆ "2515–00–800–0–01–101(ಸಹಾಯಾನುದಾನ)(ಯೋಜನೆ)" ಅಡಿಯಲ್ಲಿ ರೂ.400.00 ಲಕ್ಷಗಳನ್ನು (ನಾನ್ನೂರು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2009–10ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16–05–2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 1390

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಕುಮಾರಿ ಎಲ್.ಮೀನಾಕ್ಷಮ್ಮ, ಸಹಕಾರ ಸಂಘಗಳ ಲೆಕ್ಕಪರಿಶೋಧಕರು, ಸಹಾಯಕ ನಿರ್ದೇಶಕರ ಕಛೇರಿ, ಮೈಸೂರು ಇವರ ಜನ್ಮ ದಿನಾಂಕದ ತಿದ್ದುಪಡಿಗಾಗಿ ಮಂಡನಾಧಿಕಾರಿಯ ನೇಮಕ ಹಾಗೂ ಪ್ರಕರಣದ ವಿಚಾರಣೆಗೆ ಆದೇಶಿಸುವ ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಲೆಕ್ಕ 1/ಎಲ್.ಮೀ./ಜ.ದಿ.ಬ. 249/2008–09, ದಿನಾಂಕ:27–01–2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಮೇಲೆ ಓದಲಾದ ತಮ್ಮ ಪ್ರಸ್ತಾವನೆಯಲ್ಲಿ ಕುಮಾರಿ ಎಲ್.ಮೀನಾಕ್ಷಮ್ಮ ಇವರು ಇಲಾಖೆಯ ಲೆಕ್ಕಪರಿಶೋಧಕರ ಹುದ್ದೆಗೆ ಕರ್ನಾಟಕ ಲೋಕ ಸೇವಾ ಆಯೋಗದಿಂದ ಆಯ್ಕೆಗೊಂಡು ಅವರ ಕಚೇರಿ ಆದೇಶ ಸಂಖ್ಯೆ 4: ಸಿಬ್ಬಂದಿ–2/ನೇಮಕಾತಿ/43/2007–08 ದಿನಾಂಕ 19–05–2008 ರನ್ವಯ ಮೈಸೂರು ಉಪ ವಿಭಾಗ, ಮೈಸೂರು ಕಛೇರಿಗೆ ನಿಯುಕ್ತಿ ಹೊಂದಿ ದಿನಾಂಕ 23–05–2008 ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿದ್ದು, ದಿನಾಂಕ 08–09–2008 ರ ಮನವಿಯಲ್ಲಿ ಅವರ ಜನ್ಮ ದಿನಾಂಕ ಬದಲಾವಣೆಗೆ ಮನವಿಯನ್ನು ಸಲ್ಲಿಸಿರುತ್ತಾರೆ.

The Karnataka State Servants (Determination of Age) Act 1974ರ ಕಲಂ3(2) ರಂತೆ ಕುಮಾರಿ ಎಲ್.ಮೀನಾಕ್ಷಮ್ಮ ಇವರ ಎಸ್.ಎಸ್.ಎಲ್.ಸಿ. ಅಂಕ ಪಟ್ಟಿಯಲ್ಲಿನ ಜನ್ಮ ದಿನಾಂಕವನ್ನಾಧರಿಸಿ ಇವರು ಕೆಸಲಕ್ಕೆ ಸೇರಿದಾಗ ಸೇವಾ ಪುಸ್ತಕದಲ್ಲಿ ಇವರ ಜನ್ಮ ದಿನಾಂಕವನ್ನು ದಿನಾಂಕ 1–9–1971 ಎಂದು ದಾಖಲಿಸಿ ಅಂಗೀಕರಿಸಿದೆ. ಆದರೆ ಕುಮಾರಿ ಎಲ್.ಮೀನಾಕ್ಷಮ್ಮ ರವರು ದಿನಾಂಕ 8–9–2008 ರ ಮನವಿಯೊಂದಿಗೆ ಸಲ್ಲಿಸಿರುವ CSI Worth Memorial Hospital, Mysore ಇವರ ದಿನಾಂಕ 24–10–2008 ರ ಪತ್ರ ಹಾಗೂ ಜನನ ಪ್ರಮಾಣ ಪತ್ರದ ದೃಢೀಕೃತ ಪ್ರತಿ ಮತ್ತು ಮೈಸೂರು ಮಹಾ ನಗರ ಪಾಲಿಕೆ ಇವರ ದಿನಾಂಕ 3–8–2007ಕ್ಕೆ ಇತ್ತಿರುವ ಜನನ ಪ್ರಮಾಣ ಪತ್ರ ಇವುಗಳಿಂದ ಇವರ ಜನ್ಮ ದಿನಾಂಕ 14–12–1973 ರಂದು ಇರುತ್ತದೆ. ಮೇಲ್ಕಂಡ ಕಾಯ್ದೆಯ ಕಲಂ 5 ರಂತೆ ಸೇವೆಗೆ ಸೇರಿದ ಮೂರು ವರ್ಷಗಳ ಒಳಗೆ ಸರ್ಕಾರಿ ನೌಕರರು ಸೇವಾ ಪುಸ್ತಕದಲ್ಲಿ ದಾಖಲಿಸಿ ಅಂಗೀಕೃತಗೊಂಡ ಜನ್ಮ ದಿನಾಂಕದ ಬದಲಾವಣೆಗೆ ಮನವಿ ಸಲ್ಲಿಸಬಹುದೆಂದು ಈ ಕಲಂನ ಉಪ ಕಲಂ(3) ರಂತೆ ಸರ್ಕಾರವು ಈ ಕುರಿತು ಪರಿಶೀಲಿಸಿ ತಪಾಸಣೆ ಕೈಗೊಳ್ಳಲು ಅಧಿಕಾರಿಯನ್ನು ನೇಮಿಸಿ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂತಲೂ ಹಾಗೂ ಉಪ ಕಲಂ (4) ರಂತೆ ಈ ರೀತಿ ನೇಮಕಗೊಂಡ ಅಧಿಕಾರಿಗೆ ಸಿವಿಲ್

ನ್ಯಾಯಾಲಯದ ಅಧಿಕಾರ ಇರುತ್ತದೆಂದು ಹಾಗೂ ಸಂಬಂಧಪಟ್ಟ ಸರ್ಕಾರಿ ನೌಕರರು ಈ ಅಧಿಕಾರಿಗಳು ಸೂಚಿಸಿದ ದಾಖಲೆಗಳನ್ನು ಪರಿಶೀಲನೆಗೆ ಒದಗಿಸಬೇಕೆಂದಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಪರಿಶೀಲನೆಗೆ ಸಲ್ಲಿಸಲಾಗಿ, ಸದರಿ ಅಂಶದ ಬಗ್ಗೆ ಸುದೀರ್ಘವಾದ ವಿಚಾರಣೆಯನ್ನು ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿಗಳು ಕಾನೂನು ಇಲಾಖೆ ಇವರು The Karnataka State Servants (Determination of Age) Act 1975 ರನ್ವಯ ಮಾಡಬೇಕಾಗಿರುವುದರಿಂದ ಸಹಕಾರ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ರುಡಾಲ್ಫ್ ಪೆರ್ರೈರಿಯಾ (Rudalf Periera) ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯಗಳು) ಕಾನೂನು ಇಲಾಖೆ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲು ಸೂಚಿಸಿದೆ.

ಆದ್ದರಿಂದ ಪ್ರಕರಣದ ವಿಚಾರಣೆಗೆ ಹಾಗೂ ಸಹಕಾರ ಇಲಾಖೆಯ ಪರವಾಗಿ ವಾದ ಮಂಡಿಸುವ ಸಲುವಾಗಿ ಮಂಡನಾಧಿಕಾರಿಯನ್ನು ನೇಮಕ ಮಾಡಲು ಈ ಬಗ್ಗೆ ಕಾನೂನು ಇಲಾಖೆಯೊಡನೆ ಸಮಾಲೋಚಿಸಿ, ಈ ಮುಂದಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 32 ಎಲೆಸೇ 2009 ಬೆಂಗಳೂರು, ದಿನಾಂಕ: 26ನೇ ಮೇ 2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಕುಮಾರಿ ಎಲ್.ಮೀನಾಕ್ಷಮ್ಮ, ಸಹಕಾರ ಸಂಘಗಳ ಲೆಕ್ಕಪರಿಶೋಧಕರು, ಸಹಾಯಕ ನಿರ್ದೇಶಕರ ಕಛೇರಿ, ಮೈಸೂರು ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ನಿಯಮ 5 ರ ಉಪನಿಯಮ 1 ರನ್ವಯ ತಿದ್ದುಪಡಿ ಮಾಡುವ ಸಲುವಾಗಿ ಸದರಿ ಅಧಿನಿಯಮದ 5 ರ ಉಪನಿಯಮ 3 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ವಿಚಾರಣಾಧಿಕಾರಿಗಳ ಮುಂದೆ ಸಹಕಾರ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ರುಡಾಲ್ಫ್ ಪೆರ್ರೈರಿಯಾ (Rudalf Periera) ಅಧೀನ ಕಾರ್ಯದರ್ಶಿ (ವ್ಯಾಜ್ಯಗಳು) ಕಾನೂನು ಇಲಾಖೆ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ ಪ್ರಕರಣದ ವಿಚಾರಣೆಗೆ ಆದೇಶಿಸಿದೆ.

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅ.ಟಿ.ಸಂಖ್ಯೆ: ಲಾ 129 ಅ.ಬಿ/2009 ದಿನಾಂಕ 20.03.2009 ಹಾಗೂ ಲಾ: 09 ಜದಿವಿ 2009 ದಿನಾಂಕ 20-04-2009 ರನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1391

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## INFRASTRUCTURE DEVELOPMENT SECRETARIAT

**Sub:** Release of State share towards Bidar Gulbarga New Railway Line Project.

**Read:**
1. G.O.No. IDD 12 NSW 2004 dated 5.06.2007
2. G.O.No. IDD 12 NSW 2004 dated 28.09.2007
3. G.O.No. IDD 12 NSW 2004 dated 21.01.2008
4. G.O.No. IDD 12 NSW 2004 dated 13.05.2008
5. Letter No. W.Con/338/C/90 Vol.V dated 21.4.09 from the CE (Con.,I) SCR, Secunderabad.

**Preamble:**

In the Government Order read at Sl. No.(1) above, the State Government has accorded Sanction for taking up Bidar-Gulbarga new railway poject on50:50 cost sharing basis between the Ministry of Railway and Government of Karnataka and for releasing 50% of the cost required for completion of the project within a period of 3 years.

2. In the G.O. read at Sl.No. (2) (3) and (4) above the State Government has released so far an amount of Rs. 40.00 crore towards the share of the State Government for Bidar - Gulbarga New railway project.

3. The south Central Railway vide their letter read at Sl.No. (5) above, has stated that an amount of Rs. 134.51 crore has been spent for project upto 31.3.2009 by railway and the state Government has released so far an amount of Rs. 40.00 crore, and have requested to take up these works at a fast pace, it

is necessary that Government of Karnataka deposits at least Rs. 50.00 crore more in the current year to meet the current liabilities and to call for additional tenders.

4. The request has been examined in detail and hence this order.

**Government Order No.IDD 13 NSW 2008, Bangalore, Dated: 26th June 2009**

After careful examination of the request of railway, Government of Karnataka is pleased to release an amount of Rs.25.00 crores (Twenty Five crores only) towards the share of the State Government for the Bidar-Gulbarga new railway project.

1. The expenditure shall be met under the Head of Account 5465-01-190-3-10 (P)-Bidar-Gulbarga Railway line project during 2009-10.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), south Central Railway, Secunderabad.

3. This order is issued in accordance with the concurrence of Finance Department given vide U.O.Note.No.FD 1030 Exp-I/09 dated 23.06.2009.

By Order and in the name of Governor of Karnataka,

**K.S. VENUGOPAL**

P.R. 1411

Under Secretary to Government (I/c),
Infrastructure Development Department

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಉತ್ತರ ಕನ್ನಡ ಜಿಲ್ಲೆಗೆ ಸಂಬಂಧಪಟ್ಟಂತೆ ಮೀನುಗಾರಿಕೆ ಯಾಂತ್ರಿಕ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಸಮಿತಿಯನ್ನು ಪರಿಷ್ಕರಿಸಿ ಪುನರ್‌ರಚಿಸುವಿಕೆ.

**ಓದಲಾಗಿದೆ:** ಪತ್ರ ಸಂಖ್ಯೆ:ಎಂಇಎಫ್/9/2009–10 ದಿನಾಂಕ:08–06–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಮೀನುಗಾರಿಕೆ ಇಲಾಖೆ ಇವರು ಉತ್ತರ ಕನ್ನಡ ಜಿಲ್ಲೆಯಲ್ಲಿ ಮೀನುಗಾರಿಕೆ ಯಾಂತ್ರಿಕ ದೋಣಿಗಳನ್ನು ನಿರ್ಮಿಸಲು ಇಲಾಖಾ ವತಿಯಿಂದ ಸಾಧ್ಯತಾ ಪ್ರಮಾಣ ಪತ್ರ ನೀಡಲು ದಿನಾಂಕ :21–12–1988ರ ಆದೇಶದಲ್ಲಿ ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ ಇದರ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿ ಒಂದನ್ನು ರಚಿಸಲಾಗಿದ್ದು, ಸದರಿ ಸಮಿತಿಗೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಅಧ್ಯಕ್ಷರಾಗಿದ್ದು, ಪ್ರತೀ ವರ್ಷ ಯಾಂತ್ರೀಕೃತ ಮೀನುಗಾರಿಕೆ ದೋಣಿಗಳನ್ನು ನಿರ್ಮಿಸಲು ಅನುವಾಗುವಂತೆ ಸಾಧ್ಯತಾ ಪ್ರಮಾಣ ಪತ್ರ ಬಯಸಿ ಬರುವ ಬೋಟು ಮಾಲೀಕರಿಗೆ, ಸಾಧ್ಯತಾ ಪ್ರಮಾಣ ಪತ್ರ ನೀಡುತ್ತಿರುವ ರೀತಿಯಲ್ಲಿಯೇ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಅನುವಾಗುವಂತೆ ಸಾಧ್ಯತಾ ಪ್ರಮಾಣ ಪತ್ರಗಳನ್ನು ನೀಡಲು ಸಮಿತಿ ಒಂದನ್ನು ರಚಿಸಿರುವಂತೆ ಉತ್ತರ ಕನ್ನಡ ಜಿಲ್ಲೆಗೂ ರಚಿಸಬೇಕೆಂದು ಕೋರಿರುತ್ತಾರೆ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಪಸಂಮೀ 113 ಮೀಇಯೋ 2009, ಬೆಂಗಳೂರು, ದಿನಾಂಕ: 27ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಉತ್ತರ ಕನ್ನಡ ಜಿಲ್ಲೆಯಲ್ಲಿ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಅನುವಾಗುವಂತೆ ಸಾಧ್ಯತಾ ಪ್ರಮಾಣ ಪತ್ರಗಳನ್ನು ನೀಡಲು ಈ ಕೆಳಕಂಡಂತೆ ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಮತ್ತು ಹೊನ್ನಾವರ ಮೀನುಗಾರಿಕಾ ಬಂದರು ಯೋಜನೆ, ಮಲ್ಪೆ, ಉಡುಪಿ ಇವರ ಅಧ್ಯಕ್ಷತೆಯಲ್ಲಿ ಸಮಿತಿ ಒಂದನ್ನು ರಚಿಸಿ ಆದೇಶಿಸಿದೆ.

1) ಯೋಜನಾ ಸಮನ್ವಯಾಧಿಕಾರಿ ಮಲ್ಪೆ ಮತ್ತು ಹೊನ್ನಾವರ ಮೀನುಗಾರಿಕಾ ಬಂದರು ಯೋಜನೆ, ಮಲ್ಪೆ, ಉಡುಪಿ – ಅಧ್ಯಕ್ಷರು
2) ಪ್ರಧಾನ ವ್ಯವಸ್ಥಾಪಕರು, ಉತ್ತರ ಕನ್ನಡ ಜಿಲ್ಲಾ ಸಹಕಾರಿ ಮೀನು ಮಾರಾಟ ಫೆಡರೇಶನ್ (ನಿ), ಕಾರವಾರ – ಸದಸ್ಯರು
3) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮ (ನಿ), ಮಂಗಳೂರು – ಸದಸ್ಯರು

4) ಲೀಡ್ ಬ್ಯಾಂಕ್ ಮೆನೇಜರ್, ಕಾರವಾರ – ಸದಸ್ಯರು

5) ಮೀನುಗಾರಿಕಾ ಉಪ ನಿರ್ದೇಶಕರು, ಕಾರವಾರ – ಸದಸ್ಯ ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಂ. ರಾಜಣ್ಣ**

ಪಿ.ಆರ್. 1425 ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ(ಮೀ)

**ಒಳಾಡಳಿತ ಸಚಿವಾಲಯ**

**ವಿಷಯ:** ಚಾಮರಾಜನಗರದ ಹಳೆಯ ಉಪ ಕಾರಾಗೃಹ ಕಟ್ಟಡವನ್ನು ತಾತ್ಕಾಲಿಕವಾಗಿ ಪೊಲೀಸ್ ಠಾಣೆ ನಡೆಸಲು ಪೊಲೀಸ್ ಇಲಾಖೆಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 257 ಪಿಓಪಿ 2008 ದಿನಾಂಕ: 13–2–2009

2. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಡಿಎಂ1:ಸಿಆರ್–6/2007–08, ದಿನಾಂಕ 21.5.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಸರ್ಕಾರವು ಚಾಮರಾಜನಗರದಲ್ಲಿ ವಿಶೇಷ ಪೋಲೀಸ್ ಠಾಣೆಯನ್ನು ಘೋಷಣೆ ಮಾಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು, ಚಾಮರಾಜನಗರದಲ್ಲಿ ವಿಶೇಷ ಪೊಲೀಸ್ ಠಾಣೆಯನ್ನು ಘೋಷಿಸಿದ್ದು, ಸದರಿ ಠಾಣೆಯನ್ನು ಪ್ರಾರಂಭಿಸಲು ಚಾಮರಾಜನಗರದಲ್ಲಿ ಸರ್ಕಾರಿ ಕಟ್ಟಡ ಲಭ್ಯವಿಲ್ಲದಿರುವುದರಿಂದ, ಕಾರಾಗೃಹ ಇಲಾಖೆಯ ವಶದಲ್ಲಿರುವ ಚಾಮರಾಜನಗರದಲ್ಲಿನ ಖಾಲಿ ಇರುವ ಹಳೆಯ ಉಪ ಕಾರಾಗೃಹ ಕಟ್ಟಡವನ್ನು ಹಂಚಿಕೆ ಮಾಡಬೇಕೆಂದು ಪೊಲೀಸ್ ಮಹಾನಿರ್ದೇಶಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬೆಂಗಳೂರು ಇವರು ದಿ:16–5–2009ರಂದು ಬರೆದ ಪತ್ರದಲ್ಲಿ ಕೋರಿರುತ್ತಾರೆಂದು ತಿಳಿಸಿರುತ್ತಾರೆ.

ಸದರಿ ಹಳೆಯ ಉಪ ಕಾರಾಗೃಹ ಕಟ್ಟಡದ ನಿವೇಶನದಲ್ಲಿ ಕಾರಾಗೃಹ ಸಿಬ್ಬಂದಿಗಳಿಗೆ ವಸತಿ ಗೃಹವನ್ನು ನಿರ್ಮಿಸಲು ಉದ್ದೇಶಿಸಿದ್ದು, 2009–10ನೇ ಸಾಲಿಗೆ ಅನುದಾನ ಕೋರಿಕೆ ಸಲ್ಲಿಸಲಾಗಿದೆ ಮತ್ತು ಪರ್‌ಸ್ಪೆಕ್ಟೀವ್ ಪ್ಲಾನ್ (2ನೇ ಹಂತ) ಅಡಿಯಲ್ಲಿಯೂ ಸದರಿ ಕಾಮಗಾರಿಗೆ ಕೇಂದ್ರ ಸರ್ಕಾರಕ್ಕೂ ಪ್ರಸ್ತಾವನೆ ಸಲ್ಲಿಸಲಾಗಿದೆ. ಅನುದಾನ ಮಂಜೂರಾಗುವವರೆಗೆ ಸದರಿ ಹಳೆಯ ಕಾರಾಗೃಹ ಕಟ್ಟಡವನ್ನು ಪೊಲೀಸ್ ಮಹಾನಿರ್ದೇಶಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬೆಂಗಳೂರು ಇವರು ಪ್ರಸ್ತಾಪಿಸಿರುವ ಪೊಲೀಸ್ ಠಾಣೆ ಪ್ರಾರಂಭಿಸಲು ಲೋಕೋಪಯೋಗಿ ಇಲಾಖೆ ವತಿಯಿಂದ ನಿರ್ಧರಿಸಲ್ಪಡುವ ಬಾಡಿಗೆ ಆಧಾರದಲ್ಲಿ ತಾತ್ಕಾಲಿಕವಾಗಿ ಮೇಲೆ ಪ್ರಸ್ತಾಪಿಸಿದ ಕಾಮಗಾರಿಗಳಿಗೆ ಅನುದಾನ ಮಂಜೂರಾದ ತಕ್ಷಣ ಸದರಿ ಕಟ್ಟಡವನ್ನು ತೆರವುಗೊಳಿಸಿಕೊಡುವ ಷರತ್ತಿಗೆ ಒಳಪಟ್ಟಂತೆ ವಹಿಸಿಕೊಡಬಹುದೆಂದು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರು ತಿಳಿಸಿ, ತತ್ಸಂಬಂಧ ಆದೇಶ ಹೊರಡಿಸುವಂತೆ ಕೋರಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 141 ಪಿಆರ್‌ಎ 2009; ಬೆಂಗಳೂರು, ದಿನಾಂಕ: 20ನೇ ಜೂನ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕಾರಾಗೃಹ ಇಲಾಖೆಯ ವಶದಲ್ಲಿರುವ ಚಾಮರಾಜನಗರ ಪಟ್ಟಣ ರಥದ ಬೀದಿಯಲ್ಲಿನ ಖಾಲಿ ಇರುವ ಹಳೆಯ ಉಪ ಕಾರಾಗೃಹ ಕಟ್ಟಡದಲ್ಲಿ ಚಾಮರಾಜನಗರ ವಿಶೇಷ ಪೊಲೀಸ್ ಠಾಣೆಯನ್ನು ಪ್ರಾರಂಭಿಸುವ ಸಲುವಾಗಿ, ಪೊಲೀಸ್ ಮಹಾನಿರ್ದೇಶಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬೆಂಗಳೂರು ಇವರಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಾತ್ಕಾಲಿಕವಾಗಿ ಹಂಚಿಕೆ ಮಾಡಿ ಸರ್ಕಾರವು ಆದೇಶಿಸಿದೆ.

**ಷರತ್ತುಗಳು:**

1. ಲೋಕೋಪಯೋಗಿ ಇಲಾಖೆಯು ನಿರ್ಧರಿಸಲ್ಪಡುವ ಬಾಡಿಗೆಯನ್ನು ನೀಡತಕ್ಕದ್ದು.
2. ಈ ಕಟ್ಟಡ ನಿವೇಶನದಲ್ಲಿ ಉದ್ದೇಶಿತ ಕಾರಾಗೃಹ ಸಿಬ್ಬಂದಿಗಳಿಗೆ ವಸತಿಗೃಹಗಳನ್ನು ನಿರ್ಮಿಸಲು ಅನುದಾನ ಮಂಜೂರಾದ ಕೂಡಲೇ, ಕಾಮಗಾರಿ ಕೈಗೊಳ್ಳಲು ಅನುಕೂಲವಾಗುವಂತೆ ಕಟ್ಟಡವನ್ನು ತೆರವುಗೊಳಿಸತಕ್ಕದ್ದು.

3. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು, ಬೆಂಗಳೂರು ಇವರು ಪೊಲೀಸ್ ಮಹಾನಿರ್ದೇಶಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬೆಂಗಳೂರು ಇವರೊಡನೆ ಸೂಕ್ತ ಕರಾರು ಮಾಡಿಕೊಳ್ಳತಕ್ಕದ್ದು.
4. ಸರ್ಕಾರದ ಆದೇಶದಂತೆ ಕ್ರಮ ಕೈಗೊಂಡ ಬಗ್ಗೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಪಿ.ಆರ್. 1445

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಸೆರೆಮನೆ ಮತ್ತು ಸಿನಿಮಾ)

## ಕೃಷಿ ಸಚಿವಾಲಯ

**ವಿಷಯ:** ಧಾರವಾಡ ಕೃಷಿ ವಿಶ್ವವಿದ್ಯಾಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2007–08ನೇ ಸಾಲಿನ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ:** ಕುಲಸಚಿವರು ಕೃಷಿ ವಿಶ್ವವಿದ್ಯಾಲಯ, ಧಾರವಾಡರವರ ಪತ್ರ ಸಂಖ್ಯೆ:ಕುಸ:ಸ್ನಾ:ಪ್ರವೇಶ:ಎ–3/2009, ದಿನಾಂಕ 14–5–2009

**ಪ್ರಸ್ತಾವನೆ:**

ಧಾರವಾಡ ಕೃಷಿ ವಿಶ್ವವಿದ್ಯಾಲಯದ ಕುಲಸಚಿವರು ಮೇಲೆ ಓದಲಾದ ಪತ್ರದಲ್ಲಿ 2009–10ನೇ ಸಾಲಿನಲ್ಲಿ ಕೃಷಿಕರ ಮತ್ತು ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಆಯ್ಕೆ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ:

1) ಡೀನ್ (ಗೃಹ, ವಿಜ್ಞಾನ) ಗೃಹ ವಿಜ್ಞಾನ ಮಹಾವಿದ್ಯಾಲಯ, ಧಾರವಾಡ.
2) ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಧಾರವಾಡ.
3) ಜಂಟಿ ನಿರ್ದೇಶಕರು (ಅಭಿವೃದ್ಧಿ), ಪಶು ಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು.

ಸದರಿ ಪ್ರಸ್ತಾವನೆ ಪರಿಶೀಲಿಸಿದ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 116 ಕೃವಿವಿ 2009, ಬೆಂಗಳೂರು, ದಿನಾಂಕ: 30ನೇ ಮೇ 2009.**

ಧಾರವಾಡ ಕೃಷಿ ವಿಶ್ವವಿದ್ಯಾನಿಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2009–10ನೇ ಸಾಲಿನ ಸ್ನಾತಕ ಕೋರ್ಸ್‌ಗಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕೆ ಈ ಕೆಳಕಂಡಂತೆ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ:

1) ಡೀನ್ (ಗೃಹ ವಿಜ್ಞಾನ) ಗೃಹ ವಿಜ್ಞಾನ ಮಹಾವಿದ್ಯಾಲಯ, ಧಾರವಾಡ.
2) ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಧಾರವಾಡ.
3) ಜಂಟಿ ನಿರ್ದೇಶಕರು (ಅಭಿವೃದ್ಧಿ), ಪಶು ಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಅವರ ಹೆಸರಿನಲ್ಲಿ,

ಪಿ.ಆರ್. 1446

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಬೆಳಗಾವಿಯಲ್ಲಿ ಶ್ರೀ ರಾಮಕೃಷ್ಣ ಮಿಷನ್‌ಗೆ ಲೀಸ್ ಮೇಲೆ ನೀಡಿರುವ ಜಮೀನನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲೋಇ 104 ಬಿಎಂಎಸ್ 2001, ದಿ: 24–10–2001.
2) ಸರ್ಕಾರದ ಆದೇಶ ಸಂಖ್ಯೆ: ಲೋಇ 104 ಬಿಎಂಎಸ್ 2001 ದಿ: 30.01.2002.
3) ಸರ್ಕಾರದ ಆದೇಶ ಸಂಖ್ಯೆ: ಲೋಇ 104 ಬಿಎಂಎಸ್ 2001 ದಿ: 28.10.2003.
4) ಕಾರ್ಯದರ್ಶಿಗಳು, ಶ್ರೀ ರಾಮಕೃಷ್ಣ ಆಶ್ರಮ, ಬೆಳಗಾಂ ಇವರ ಮನವಿ ಪತ್ರ ದಿ:8.2.2004

5) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ) ಧಾರವಾಡ ಇವರ ಪತ್ರ ಸಂಖ್ಯೆ: ಸಿಇಎನ್/ಸಿ–16/ಕಸಮ–39/01–02/3229 ದಿ: 26.7.2004

6) ಸರ್ಕಾರದ ಆದೇಶ ಸಂಖ್ಯೆ: ಲೋಇ ಬಿಎಂಎಸ್ 2005 ದಿ: 28.06.2006.

7) ಕಾರ್ಯದರ್ಶಿಗಳು, ಶ್ರೀ ರಾಮಕೃಷ್ಣ ಆಶ್ರಮ, ಬೆಳಗಾಂ ಇವರ ಮನವಿ ಪತ್ರದ ದಿ: 30.06.2008.

**ಪ್ರಸ್ತಾವನೆ:**

ಬೆಳಗಾವಿ ನಗರದ ಕೋಟೆ ಪ್ರದೇಶದ ಸರ್ವೇ ನಂ: 345 ರಲ್ಲಿ 3642 ಚ.ಮೀ (36 ಗುಂಟೆ) ಜಾಗವನ್ನು ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಬೇಲೂರು ಮಠ ಪಶ್ಚಿಮ ಬಂಗಾಳ ಇವರಿಗೆ ವಾರ್ಷಿಕ ರೂ. 1,00,000/– ಗಳ ನೆಲ ಬಾಡಿಗೆಯನ್ನು ನಿಗದಿಪಡಿಸಿ 30 ವರ್ಷಗಳ ಅವಧಿಗೆ ಕೆಲವು ಷರತ್ತುಗಳೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದನ್ವಯ ಗುತ್ತಿಗೆಗೆ ನೀಡಿ ಆದೇಶ ಹೊರಡಿಸಲಾಗಿದೆ.

ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಇವರಿಗೆ ಗುತ್ತಿಗೆ ನೀಡಲಾದ ಸದರಿ 36 ಗುಂಟೆ ಜಮೀನಿಗೆ ನಿಗಧಿಪಡಿಸಲಾದ ರೂ.1,00,000/– ಗಳ ನೆಲ ಬಾಡಿಗೆಯನ್ನು ರೂ.25,000 ಗಳಿಗೆ ಕಡಿಮೆಗೊಳಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ಮಾರ್ಪಡಿಸಿ ಆದೇಶ ಹೊರಡಿಸಲಾಗಿದೆ.

ಶ್ರೀ ರಾಮಕೃಷ್ಣ ಮಿಷನ್ ಇವರಿಗೆ ಈಗಾಗಲೇ ನೀಡಿರುವ 36 ಗುಂಟೆ ಜಾಗಕ್ಕೆ ಹೊಂದಿಕೊಂಡಂತೆ ಇರುವ 1.63 ಎಕರೆ ಜಮೀನು ಮತ್ತು ಅದರಲ್ಲಿರುವ ಕಾಡಾ ಬಂಗಲೆಯನ್ನು ಒಳಗೊಂಡಂತೆ ವಾರ್ಷಿಕ ರೂ. 60,000/– ಗಳ ನೆಲ ಬಾಡಿಗೆಯನ್ನು ನಿಗದಿಪಡಿಸಿ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಿ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಅನ್ವಯ ಕ್ರಮ ಸಂಖ್ಯೆ: 1ರ ಸರ್ಕಾರಿ ಆದೇಶದಲ್ಲಿ ವಿಧಿಸಿರುವ ಷರತ್ತುಗಳೊಂದಿಗೆ ಆದೇಶ ಹೊರಡಿಸಲಾಗಿದೆ.

ಬೆಳಗಾಂ ನಗರದ ಕೋಟೆ ಪ್ರದೇಶದ ಸರ್ವೆ ನಂಬರ್ 345ರಲ್ಲಿನ 2.62 ಎಕರೆ ಜಾಗವನ್ನು ಉಚಿತವಾಗಿ ಸರ್ಕಾರಕ್ಕೆ ನೀಡಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ(4) ರಲ್ಲಿ ಕಾರ್ಯದರ್ಶಿಗಳು, ಶ್ರೀ ರಾಮಕೃಷ್ಣ ಆಶ್ರಮ, ಬೆಳಗಾಂ ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ: (5) ರಲ್ಲಿ ಮುಖ್ಯ ಇಂಜಿನಿಯರ್, ಸಂಕ(ಉ) ಧಾರವಾಡ ಇವರು ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಇವರು ಕೋರಿರುವ ಪ್ರಸ್ತಾವನೆಗೆ ಶಿಫಾರಸ್ಸು ಮಾಡಿರುತ್ತಾರೆ.

ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಬೇಲೂರು ಮಠ ಪಶ್ಚಿಮ ಬಂಗಾಳ ಇವರಿಗೆ ಬೆಳಗಾಂ ಕೋಟೆ ಪ್ರದೇಶದ ಸರ್ವೆ ನಂಬರ್ 345 ರಲ್ಲಿನ 3642 ಚ.ಮೀ(36 ಗುಂಟೆ) ಜಾಗವನ್ನು ಹಾಗೂ ಇದಕ್ಕೆ ಹೊಂದಿಕೊಂಡಿರುವ 1.63 ಎಕರೆ ಜಾಗವನ್ನು ಸಹ ಅದರಲ್ಲಿರುವ ಕಾಡಾ ಬಂಗಲೆ ಸಮೇತ ಈಗಾಗಲೇ ಗುತ್ತಿಗೆ ಆಧಾರದ ಮೇಲೆ ನೀಡಲಾಗಿದ್ದು, ಹೆಚ್ಚುವರಿಯಾಗಿ ಇದಕ್ಕೆ ಹೊಂದಿಕೊಂಡಂತೆ ಇದೇ ಸರ್ವೆ ನಂಬರ್ 345ರಲ್ಲಿ ಪುನಃ 2.62 ಜಮೀನನ್ನು ಸೇರಿಸಿಕೊಂಡು ಒಟ್ಟಾರೆ ಈ ಆಶ್ರಮಕ್ಕೆ 5.15 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ಪ್ರತಿ ಎಕರೆ ಪ್ರತಿ ವರ್ಷಕ್ಕೆ ರೂ. 1,000/–ಗಳು ನೆಲ ಬಾಡಿಗೆ ವಿಧಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (6)ರ ಸರ್ಕಾರಿ ಆದೇಶನ್ವಯ ಷರತ್ತುಗಳೊಂದಿಗೆ ಗುತ್ತಿಗೆಗೆ ನೀಡಿ ಆದೇಶ ಹೊರಡಿಸಲಾಗಿದೆ.

ಶ್ರೀ ರಾಮಕೃಷ್ಣ ಮಿಷನ್ ಆಶ್ರಮದವರು ಮೇಲೆ ಓದಲಾದ ಕ್ರಮ ಸಂಖ್ಯೆ: (7)ರಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿ ಪ್ರಸ್ತುತ ಜಮೀನು ಆಶ್ರಮ ಸ್ವಂತ ಜಮೀನಗಿರದೆ ಲೀಸ್ ಮೇಲೆ ಪಡೆದಿರುವುದರಿಂದ ಆಶ್ರಮವನ್ನು ತಮ್ಮ ಇಚ್ಛೆಯಂತೆ ಅಭಿವೃದ್ಧಿಪಡಿಸಲು ಸಾಧ್ಯವಾಗುವುದಿಲ್ಲ ಹಾಗೂ ಸೇವಾ ಚಟುವಟಿಕೆಗಳನ್ನು ವಿಸ್ತರಿಸಲಾಗುವುದಿಲ್ಲವೆಂದು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ, ಈಗಾಗಲೇ ಲೀಸ್ ಮೇಲೆ ನೀಡಿರುವ ಒಟ್ಟು 5.15 ಎಕರೆ ಜಮೀನನ್ನು ಖಾಯಂ ಆಗಿ ಆಶ್ರಮಕ್ಕೆ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಸರ್ಕಾರ ಅದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 172 ಬಿಎಂಎಸ್ 2008, ಬೆಂಗಳೂರು, ದಿನಾಂಕ: 2ನೇ ಜೂನ್ 2009**

ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಬೇಲೂರು ಮಠ, ಪಶ್ಚಿಮ ಬಂಗಾಳ ಇವರಿಗೆ ಬೆಳಗಾವಿ ನಗರದ ಕೋಟೆ ಪ್ರದೇಶದ ಸರ್ವೆ ನಂಬರ್ 345ರಲ್ಲಿನ 5.15 ಎಕರೆ ಜಮೀನನ್ನು ಲೀಸ್ ಮೇಲೆ ನೀಡಲಾಗಿದ್ದು, ಸದರಿ ಜಮೀನನಲ್ಲಿರುವ ಹಳೆ ಕಟ್ಟಡದಲ್ಲಿ ಸ್ವಾಮಿ ವಿವೇಕಾನಂದರು ವಾಸವಾಗಿದ್ದ ವೈಶಿಷ್ಟ್ಯವನ್ನು ಪ್ರತಿ ಎಕರೆಗೆ ರೂ. 50,000/–ದಂತೆ (ರೂಪಾಯಿ ಐವತ್ತು ಸಾವಿರಗಳು ಮಾತ್ರ) ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಬೆಳಗಾವಿ ಇವರಿಗೆ ಖಾಯಂ ಆಗಿ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರೆಹಮತ್ ಉಲ್ಲಾ**

ಪಿ.ಆರ್. 1455

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು)

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಪಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, (ಗುಪ್ತವಾರ್ತೆ), ಚಿಕ್ಕಮಗಳೂರು, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ ಎಂ–1/ ಸಿಆರ್–1/2008/ಚಿಕ್ಕಮಗಳೂರು, ದಿನಾಂಕ 10–10–2008.
2) ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2008 ದಿನಾಂಕ 03–03–2008.
3) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ ಎಂ–1/ಸಿಆರ್–1/2008/ಚಿಕ್ಕಮಗಳೂರು ದಿನಾಂಕ: 4–10–2008.
4) ತನಿಖಾಧಿಕಾರಿಯವರ ವರದಿ ಸಂಖ್ಯೆ: ಪೊವಿ/ಕಲೋ/ಚಿಮ/ ಮೊ.ಸಂ.1/2008 ದಿನಾಂಕ:28.8.2008.
5) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರಿವೀಕ್ಷಕರ ವರದಿ, ಸಾಕ್ಷಿಧಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.
6) ಸರ್ಕಾರಿ ಆದೇಶ ಸಂಖ್ಯೆ: ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2008 ದಿನಾಂಕ:22.11.2008.
7) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ ಎಂ–1/ಸಿಆರ್–1/2008/ಚಿಕ್ಕಮಗಳೂರು ದಿನಾಂಕ: 6–12–2008 ಮತ್ತು 08–04–2009.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(1) ರಲ್ಲಿನ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಶಿಫಾರಸ್ಸಿನ ಮೇರೆಗೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ :(2)ರ ಆದೇಶದನ್ವಯ ಶ್ರೀ ಹೆಚ್.ಪಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಹೆಚ್.ಪಿ.ಹಬೀಬುಲ್ಲಾ ಬೆಗ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ಗುನ್ನೆ ಸಂಖ್ಯೆ:1/2008 ರಲ್ಲಿ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(3) ರ ಪತ್ರ ದಿನಾಂಕ: 4–10–2008 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೇ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಆಪಾದಿತ ಅಧಿಕಾರಿಯನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ)ರ ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಉಲ್ಲೇಖಿತ ಕಾಯ್ದೆಯ 19ನೆಯ ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿದ್ದರು. ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(6)ರ ಸರ್ಕಾರಿ ಆದೇಶದಲ್ಲಿ ಈ ಅಧಿಕಾರಿಯನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಆದರೆ ತದನಂತರದ ಬೆಳವಣಿಗೆಯ ಹಿನ್ನೆಲೆಯಲ್ಲಿ ಪ್ರಕರಣವನ್ನು ಮತ್ತೊಮ್ಮೆ ಪರಿಶೀಲಿಸಲಾಗಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(3)ರ ಪತ್ರ ದಿನಾಂಕ: 4–10–2008 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಎ.ವಿ.ಸುರೇಶ್, ಬಿನ್. ವೆಂಕಟಾಚಲ, ವ್ಯಾಪಾರಿ, ಕನ್ನಿಕಾ ಪ್ಲಾಸ್ಟಿಕ್, ನಾಯ್ಡು ಬೀದಿ, ಚಿಕ್ಕಮಗಳೂರು, ದಿನಾಂಕ: 7–1–2008.
2) ಪ್ರಥಮ ವರ್ತಮಾನ ವರದಿ: ಚಿಕ್ಕಮಗಳೂರು ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:1/2008 ದಿನಾಂಕ: 07–01–2008.
3) ಪ್ರಾಯೋಗಿಕ ಪಂಚನಾಮೆ ದಿನಾಂಕ: 07–01–2008 ರಂದು ಠಾಣೆಯಲ್ಲಿ ಜರುಗಿಸಿದ ವಹಿಸುವಿಕೆ ಪಂಚನಾಮೆ.

4) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್ಐ/ಸಿಎಂಇ/ಲೋಕ್/138/07–08 ದಿನಾಂಕ:09.01.2009
5) ಕೃತ್ಯ ನಡೆದ ಸ್ಥಳದ ನಕಾಶೆ: ಸಹಾಕಯ ಕಾರ್ಯನಿರ್ವಾಹಕ ಇಂಜಿನಿಯರ್, ನಂ.1, ಉಪ ವಿಭಾಗ, ಲೋಕೋಪಯೋಗಿ ಇಲಾಖೆ, ಚಿಕ್ಕಮಗಳೂರು ರವರ ಪತ್ರ ಸಂಖ್ಯೆ: ಸಕಾಇಂ./ನಂ.1/ಉವಿ/ಲೋಇ/ಚಿಮ/ಎನ್ನೆಲ್/ಲೋಕಾಯುಕ್ತ/ನಕ್ಷೆ/2007–08/926 ದಿನಾಂಕ: 14–01–2008.
6) ಲಂಚ ಕೇಳಲು ಆಧಾರವಾದ ಕಡತ ಹಾಗೂ ದಾಖಲೆಗಳು
7) **ಆಪಾದಿತರ ಸಮಜಾಯಿಷಿ ಹೇಳಿಕೆಗಳು**
   ಶ್ರೀ ಹೆಚ್.ಬಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರ ಹೇಳಿಕೆ ದಿನಾಂಕ: 7–1–2008.
8) **ಸಾಕ್ಷಿಗಳ ಪಟ್ಟಿ:**
   1) ಹೆಚ್.ವಿ.ದಶರಥರಾಜು, ರವರ ಹೇಳಿಕೆ ದಿನಾಂಕ: 7–1–2008.
   2) ಶ್ರಿ ಎ.ವಿ.ಸುರೇಶ್, ಫಿರ್ಯಾದಿರವರ ಹೇಳಿಕೆ ದಿನಾಂಕ: 8–1–2008.
   3) ಶ್ರೀ ಎಂ.ಓಂಕಾರಪ್ಪ. ಪಂಚ ಸಾಕ್ಷಿ ದಿನಾಂಕ: 8–1–2008.
   4) ಶ್ರೀ ನರಹರಿ ಗಜಾನನ ಹೆಗಡೆ, ನೆರಳು ಮತ್ತು ಪಂಚ ಸಾಕ್ಷಿ ದಿನಾಂಕ: 8–1–2008.
   5) ಶ್ರೀ ಎನ್.ಲೋಕೇಶ್, ಜ್ಯೂನಿಯರ್ ಇಂಜಿನಿಯರ್‌ರವರ ಹೇಳಿಕೆ ದಿ:8–1–2008.
   6) ಶ್ರೀ ಸಿ.ಆನಂದ್, ಸಿ.ಹೆಚ್.ಸಿ, ದಿನಾಂಕ: 7–1–2008.
   7) ಶ್ರೀ ಜೆ.ರಂಗೇಗೌಡ, ಸಿ.ಹೆಚ್.ಸಿ, ದಿನಾಂಕ 7–1–2008.
   8) ಶ್ರೀ ಬಿ.ಕೆ.ಪುಟ್ಟಸ್ವಾಮಾಚಾರ್, ಸಿ.ಹೆಚ್.ಸಿ.ರವರ ಹೇಳಿಕೆ ದಿನಾಂಕ:8–1–2008.

ತನಿಖಾಧಿಕಾರಿಯಾದ ಶ್ರೀ ಹೆಚ್.ಎನ್.ಪಂಚಾಕ್ಷರಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಚಿಕ್ಕಮಗಳೂರು, ಇವರು ಶ್ರೀ ಹೆಚ್.ಬಿ.ಹಬೀಬುಲ್ಲಾಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ರವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2) ರಡಿಯಲ್ಲಿ ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 1/2008 ರಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಶ್ರೀ ಹೆಚ್.ಹಬೀಬುಲ್ಲಾಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ರವರು ಫಿರ್ಯಾದಿಯಾದ ಶ್ರೀ ಎ.ವಿ.ಸುರೇಶ್, ಬಿನ್.ವೆಂಕಟಾಚಲ, ವ್ಯಾಪಾರಿ, ಕನ್ನಿಕಾ ಪ್ಲಾಸ್ಟಿಕ್, ನಾಯ್ಡು ಬೀದಿ, ಚಿಕ್ಕಮಗಳೂರು, ಇವರ ಅಂಗಡಿಗೆ ಭೇಟಿ ನೀಡಿ, ಸದರಿ ಅಂಗಡಿ ತಪಾಸಣೆ ಮಾಡದಿರಲು ರೂ. 15,000/– ಗಳ ಅಕ್ರಮ ಸಂಭಾವನೆಯನ್ನು ಕೊಡುವಂತೆಯೂ ಇಲ್ಲದಿದ್ದರೆ ದಂಡ ಹಾಕುವುದಾಗಿಯೂ ತಿಳಿಸಿ, ಅಕ್ರಮ ಸಂಭಾವನೆಗೆ ಒತ್ತಾಯಿಸಿರುತ್ತಾರೆ. ಫಿರ್ಯಾದಿರವರಿಗೆ ಲಂಚ ಕೊಡಲು ಇಷ್ಟವಿಲ್ಲದ್ದರಿಂದ ಸದರಿ ಆರೋಪಿತರ ಮೇಲೆ ಸೂಕ್ತ ಕಾನೂನು ಕ್ರಮ ಕೋರಿರುತ್ತಾರೆ.

ಮೇಲ್ಕಂಡ ಲಿಖಿತ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರುರವರು ಸದರಿ ಆರೋಪಿತ ಅಧಿಕಾರಿಯವರ ಮೇಲೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2) ರಡಿಯಲ್ಲಿ ಮೊಕದ್ದಮೆ ಸಂಖ್ಯೆ: 1/2008ರ ಪ್ರಕಾರ ಪ್ರಕರಣವನ್ನು ದಿನಾಂಕ: 07–01–2008 ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಪಂಚ ಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ: 07–01–2008 ರಂದು ಕನ್ನಿಕಾ ಪ್ಲಾಸ್ಟಿಕ್, ನಾಯ್ಡು ಬೀದಿ, ಚಿಕ್ಕಮಗಳೂರು, ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ, ಶ್ರೀ ಹೆಚ್.ಬಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರು ಅಕ್ರಮ ಸಂಭಾವನೆಯಾದ ರೂ.15,000/–ಗಳ ಲಂಚದ ಹಣವನ್ನು ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಲು ಸೋಡಿಯಂ ಕಾರ್ಬೊನೇಟ್ ದ್ರಾವಣದಲ್ಲಿ ಅದ್ದಿದಾಗ ದ್ರಾವಣವು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಗೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಅಧಿಕಾರಿ/ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.15,000/–ಗಳನ್ನು ಶ್ರೀ ಹೆಚ್.ಬಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರಿಂದ ಕನ್ನಿಕಾ ಪ್ಲಾಸ್ಟಿಕ್, ನಾಯ್ಡು ಬೀದಿ, ಚಿಕ್ಕಮಗಳೂರು, ಈ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿಧಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು

ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಹೆಚ್.ಬಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾಧಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಬಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2008 ಬೆಂಗಳೂರು, ದಿನಾಂಕ: 18ನೇ ಜೂನ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಬಿ.ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಈ ಮೂಲಕ ಪರಿಷ್ಕೃತ ಮಂಜೂರಾತಿಯನ್ನು ನೀಡುತ್ತಿದೆ.
ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಚೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 18-06-2009 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1503

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

**ವಿಷಯ:** ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಬಿಡಿ-27/ಸಿಆರ್-16/2008ಬಿಎಲ್‌ಆರ್ ದಿನಾಂಕ 14-05-2008.
2) ಸರ್ಕಾರಿ ಆದೇಶ ಸಂಖ್ಯೆ: ಆಇ 17 ವಾತೆತ 2008 ದಿನಾಂಕ 2-7-2008.
3) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಬಿಡಿ-27/ಸಿಆರ್-16/2008/ಬಿಎಲ್‌ಆರ್ ದಿನಾಂಕ 26-02-2009
4) ತನಿಖಾಧಿಕಾರಿಯವರ ವರದಿ ದಿನಾಂಕ: 16-1-2009.
5) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿಧಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(1) ರಲ್ಲಿನ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಶಿಫಾರಸ್ಸಿನ ಮೇರೆಗೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(2)ರ ಆದೇಶದನ್ವಯ ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ಗುನ್ನೆ ಸಂಖ್ಯೆ:16/2008 ರಲ್ಲಿ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಉಲ್ಲೇಖ (3)ರ ಪತ್ರ ದಿನಾಂಕ: 26-2-2009 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೇ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಉಲ್ಲೇಖ (3)ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ವಾಸುದೇವ ಆಚಾರ್ಯ ಬಿನ್ ಲೇಟ್ ಜಿ.ಕೃಷ್ಣಾಚಾರ್ಯ, ವ್ಯಾಪಾರಿ ಮನೆ ನಂ. 50/1, ನಂದಾದೀಪ್, ಸುಬ್ಬಣ್ಣ ಲೇಔಟ್, ಹರಿನಗರ ಕ್ರಾಸ್, ಅಂಜನಾಪುರ ಅಂಚೆ, ಬೆಂಗಳೂರು – 560062.
2) ಪ್ರಾಯೋಗಿಕ ಪಂಚನಾಮೆ ದಿನಾಂಕ: 17–04–2008
3) ಟ್ರ್ಯಾಪ್‌ನ ಮಹಜರ್ ದಿನಾಂಕ: 17–04–2008
4) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್‌ಐ/ಸಿಎಂಇ/ಲೋಕ್–09/08–09 ದಿನಾಂಕ: 03.07.2008.
5) ಕೃತ್ಯ ನಡೆದ ಸ್ಥಳದ ನಕಾಶೆ: ಸಂಖ್ಯೆ: ಸಕಾಅ/ಲೋಉವಿ/ನೆ.ಲ/ಸಿ–1/ನಕ್ಷೆ/08–09 ದಿನಾಂಕ: 12–06–2008.
6) **ಸಾಕ್ಷಿ ಹೇಳಿಕೆಗಳ ಪಟ್ಟಿ:**
   1. ಶ್ರೀ ಜಿ.ವಾಸುದೇವ ಆಚಾರ್ಯ, ಫಿರ್ಯಾದಿ
   2. ಶ್ರೀ ಕೆ.ಕೆ.ಸೈಬೊ, ನೆರಳು ಸಾಕ್ಷಿದಾರರು.
   3. ಶ್ರೀ ನರೇಶ್,
   4. ಶ್ರೀ ಬಿ.ಮಹಮದ್ ಯೂಸುಫ್, ವಾಣಿಜ್ಯ ತೆರಿಗೆ ಪರಿವೀಕ್ಷಕರು.
   5. ಶ್ರೀ ನಟರಾಜ್, ವಾಣಿಜ್ಯ ತೆರಿಗೆ ಪರಿವೀಕ್ಷಕರು.
   6. ಶ್ರೀ ಟಿ.ಸಿ.ರವಿಕುಮಾರ್, ಎ.ಇ., ಪಿಡಬ್ಲ್ಯೂಡಿ ಸಬ್ ಡಿವಿಜನ್, ನೆಲಮಂಗಲ.
   7. ಶ್ರೀ ಜಿ.ಸಿ.ನಾಗಪ್ಪ, ಹೆಚ್.ಸಿ.
   8. ಶ್ರೀ ಎನ್.ಮಂಜುನಾಥ್
   9. ಶ್ರೀ ಎಸ್.ಬಿ.ಚಂದ್ರಶೇಖರ್ (ಪೇದೆ)
   10. ಶ್ರೀ ಬಿ.ಕೆ.ಮಂಜುನಾಥ್,
   11. ಶ್ರೀ ಗೋವಿಂದ್ರಪ್ಪ ಸಿಂದ್ರಪ್ಪ
   12. ಶ್ರೀ ಜಿ.ಪ್ರಕಾಶ್
   13. ಶ್ರೀ ಪಿ.ಬಿ.ಸಂಪತ್
   14. ಶ್ರೀ ಡಿ.ನರಸಿಂಹಮೂರ್ತಿ
7) ಆಪಾದಿತರ ಸಮಜಾಯಿಷಿ/ಹೇಳಿಕೆಗಳು:
   ಶ್ರೀ ಓ.ಎನ್.ಚಂದ್ರಶೇಖರಯ್ಯ ವಾಣಿಜ್ಯ ತೆರಿಗೆ ಅಧಿಕಾರಿ, ಬೆಂಗಳೂರು.

ತನಿಖಾಧಿಕಾರಿಯಾದ ಶ್ರೀ ಎಸ್.ಮಹಾದೇವಯ್ಯ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಂಗ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು, ಇವರು ಶ್ರೀ ಓ.ಎನ್.ಚಂದ್ರಶೇಖರಯ್ಯ ವಾಣಿಜ್ಯ ತೆರಿಗೆ ಅಧಿಕಾರಿರವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಂಗ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 16/2008 ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಶ್ರೀ ಓ.ಎನ್.ಚಂದ್ರಶೇಖರಯ್ಯ ವಾಣಿಜ್ಯ ತೆರಿಗೆ ಅಧಿಕಾರಿ, ಫಿರ್ಯಾದಿಯಾದ ಶ್ರೀ ವಾಸುದೇವ ಬಿನ್ ಲೇಟ್ ಜಿ.ಕೃಷ್ಣಾಚಾರ್ಯ, ವ್ಯಾಪಾರಿ, ಮನೆ ನಂ.50/1, ನಂದಾದೀಪ್, ಸುಬ್ಬಣ್ಣ ಲೇಔಟ್, ಹರಿನಗರ ಕ್ರಾಸ್, ಅಂಜನಾಪುರ ಅಂಚೆ, ಬೆಂಗಳೂರು–560 062, ಇವರು ಗಿಫ್ಟ್ ರ್ಯಾಪಡ್‌ಗೆ ಆಡಳಿತ ನೋಡಿಕೊಳ್ಳುವ ವ್ಯವಸ್ಥಾಪಕರಾಗಿದ್ದು, ಈ ಕಂಪೆನಿಯಿಂದ ದೆಹಲಿಗೆ ಲೋಗೋ ಇಡಿಜಿಇ–2008 ಎನ್ನುವ ಮುದ್ರೆಯುಳ್ಳ 2,16,000/– ರೂ.ಗಳ ಮೌಲ್ಯದ ಸುಮಾರು 400 ಟ್ರಾವೆಲ್ಸ್ ಬ್ಯಾಗ್‌ಗಳನ್ನು ಮತ್ತು ಅಷ್ಟೇ ಮೊತ್ತದ ಪೆನ್‌ಗಳನ್ನು ದಿನಾಂಕ: 27–2–2008 ರಂದು ವಿ.ಆರ್.ಎಲ್. ಸಾರಿಗೆ ಮುಖಾಂತರದಿಂದ ಸಂಬಂಧಪಟ್ಟ ಬಿಲ್‌ಗಳೊಂದಿಗೆ ಅವರ ಡಕೇಟ್ ನಂ.600020970 ಅನ್ವಯ ಕಳುಹಿಸಿದ್ದು, ಸದರಿ ಮಾಲು ದೆಹಲಿಗೆ ತಲುಪುವ ಮುಂಚೆ ಕಾರ್ಯಕ್ರಮ ಮುಗಿದು ಹೋಗಿದ್ದ ಕಾರಣ, ಸದರಿ ಮಾಲುಗಳನ್ನು ಸ್ವೀಕರಿಸದೇ ತಿರಸ್ಕರಿಸಿದ್ದು, ಈ ಮಾಲುಗಳು ಮತ್ತೆ ಅಲ್ಲಿಂದ ಹಿಂದಿರುಗಿಸುವಂತೆ ಫಿರ್ಯಾದುದಾರರು ಕೋರಿದ್ದರ ಅನ್ವಯ ಸರ್ಕಾರಿ ಕೆಲಸವನ್ನು ಮಾಡಲು ರೂ.7,500/– ರೂ.ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ, ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರಿಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ

ನಂತರ ದಿನಾಂಕ: 17–04–2008ರಂದು ತುಮಕೂರು ರಸ್ತೆ (ಒಳ) ತನಿಖಾ ಠಾಣೆ, ನೆಲಮಂಗಲದಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿರವರು ಅಕ್ರಮ ಸಂಭಾವನೆಯಾದ ರೂ.7,500/– ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ, ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ಹಾಗೂ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.7,500/– ಗಳನ್ನು ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿರವರಿಂದ ತುಮಕೂರು ರಸ್ತೆ (ಒಳ) ತನಿಖಾ ಠಾಣೆ, ನೆಲಮಂಗಲದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿಧಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾಧಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿರವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 17 ವಾತೆತ 2008 ಬೆಂಗಳೂರು, ದಿನಾಂಕ: 9ನೇ ಜೂನ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಓ.ಎನ್.ಚಂದ್ರಶೇಖರಯ್ಯ, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 09–06–2009 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1504

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದಲ್ಲಿ ಹಳೆ ಕಾರು ಕೆಎ 01 ಸಿ 4702 ಬದಲಿಗೆ ಒಂದು ಹೊಸ ಕಾರನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಲಾ 56 ಎಲ್ಎಡಿ 2008 ದಿನಾಂಕ 01.01.2009

2. ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿ ಇವರ ಪತ್ರ ಸಂಖ್ಯೆ ಕರಾಕಾಸೇಪ್ರಾ 20 ಎಡಿಎಂ 2009 ದಿನಾಂಕ 21.10.2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ 01.01.2009ರ ಸರ್ಕಾರಿ ಆದೇಶದಲ್ಲಿ ಕಾನೂನನ್ನು ಜನ ಸಾಮಾನ್ಯರ ಹತ್ತಿರಕ್ಕೆ ತರಲು ಸಂಚಾರಿ ಜನತಾ ನ್ಯಾಯಾಲಯ (ಮೊಬೈಲ್ ಲೋಕ್ ಅದಾಲತ್) ಮತ್ತು ಕಾನೂನು ಸಾಕ್ಷರತಾ ರಥ ಯಾತ್ರೆಯ

(legal literacy chariot) ಮೂಲಕ ಜಾರಿಗೊಳಿಸಲು ಅನುವಾಗುವಂತೆ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಉಪಯೋಗಕ್ಕೆ 2 ಬಸ್ಸುಗಳನ್ನು ಪಾರದರ್ಶಕ ಆಯ್ದೆಯನ್ನು ಪಾಲಿಸಿ, ನಿಯಮಾನುಸಾರ ಖರೀದಿಸಲು ಅನುಮತಿ ನೀಡಲಾಗಿತ್ತು. ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ 22ನೇ ಸರ್ವ ಸದಸ್ಯರ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದಂತೆ ಸದರಿ ಬಸ್ಸುಗಳನ್ನು ಖರೀದಿಸಲು ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ಪಡೆಯಲು ಮತ್ತು ಪ್ರಾಧಿಕಾರದಲ್ಲಿ 1996ರ ಜೂನ್‌ನಲ್ಲಿ ಖರೀದಿಸಿರುವ ಹಳೆಯ ಅಂಬಾಸಿಡರ್ ಕಾರು ಸಂಖ್ಯೆ ಕೆಎ 01 ಸಿ 4702 ಸುಮಾರು 1,49,980 ಕಿ.ಮಿ. ಓಡಿದ್ದು ಪದೇ ಪದೇ ರಿಪೇರಿಗೆ ಬರುತ್ತಿರುವುದರಿಂದ ಆ ಹಳೆಯ ಕಾರನ್ನು ಮಾರಿ ಹೊಸ ಟಾಟಾ ಇಂಡಿಗೊ ಜಿಎಲ್‌ಎಕ್ಸ್ (ಪೆಟ್ರೋಲ್) ಯುರೋ–3 ಕಾರನ್ನು (ರೂ.4,58,413 ಅಂದಾಜು ವೆಚ್ಚದಲ್ಲಿ) ಖರೀದಿಸಲು ಅನುಮತಿ ಕೋರಿ ಉಲ್ಲೇಖಿತ (2)ರ ದಿನಾಂಕ 25.02.2009ರ ಪತ್ರದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳು ಪ್ರಸ್ತಾವನೆ ಸಲ್ಲಿಸಿದ್ದಾರೆ. ಅದನ್ನು ಪರಿಗಣಿಸಿ ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ ಆಇ 482 ವೆಚ್ಚ–12/09 ದಿನಾಂಕ 19.05.2009ರಲ್ಲಿ 2 ಬಸ್ಸುಗಳನ್ನು ಖರೀದಿಸಲು ಪಾರದರ್ಶಕ ಕಾಯ್ದೆಯಿಂದ ವಿನಾಯಿತಿ ನೀಡಿದೆ ಮತ್ತು ಕಾರನ್ನು DGSD ದರದಲ್ಲಿ ಖರೀದಿಸಲು ತಿಳಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಲಾ 10 ಎಲ್‌ಎಡಿ 2009, ಬೆಂಗಳೂರು, ದಿನಾಂಕ: 27ನೇ ಜೂನ್ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಹಳೆಯ ಅಂಬಾಸಿಡರ್ ಕಾರು ಕೆಎ–01 ಪಿ 4702ನ್ನು ನಿಯಮಾನುಸಾರ ಮಾರಾಟ ಮಾಡಿ ಅದರ ಬದಲಿಗೆ ಒಂದು ಹೊಸ ಟಾಟಾ ಇಂಡಿಗೊ ಜೆಎಲ್‌ಎಕ್ಸ್ (ಪೆಟ್ರೋಲ್) ಯುರೋ–3 ಕಾರನ್ನು ನಿಯಮಾನುಸಾರ DGSD ದರದಲ್ಲಿ ಖರೀದಿಸಲು ಅನುಮತಿಯನ್ನು ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2235–60–200–5–01–(101 ಸಹಾಯಾನುದಾನ)ರಲ್ಲಿ ಒದಗಿಸಿರುವ ಸಹಾಯಾನುದಾನದ ಹಣದಿಂದ ಭರಿಸತಕ್ಕದ್ದು.

ಇದನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್‌ಡಿ 168 ವೆಚ್ಚ–10/09 ದಿನಾಂಕ 03.04.2009ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲಾ ಹೆಚ್.ಆರ್.**

ಪಿ.ಆರ್. 1505

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ:** ಸಹಕಾರಿ ಸಂಸ್ಥೆಗಳು ಮೀನುಗಾರರಿಗೆ ನೀಡಿರುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸುಸ್ತಿ ಸಾಲಗಳ ಮೇಲಿನ ಬಡ್ಡಿ ದಂಡದ ಬಡ್ಡಿಯನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಓ 186 ಸಿಎಲ್‌ಎಸ್ 2005 ದಿನಾಂಕ: 27.09.2005.
2. ಸರ್ಕಾರಿ ಆದೇಶ ಸಂಖ್ಯೆ: ಸಿಓ 186 ಸಿಎಲ್‌ಎಸ್ 2005 ದಿನಾಂಕ: 29.11.2005.
3. ಸರ್ಕಾರಿ ಆದೇಶ ಸಂಖ್ಯೆ: ಸಿಓ 39 ಸಿಎಲ್‌ಎಸ್ 2006 ದಿನಾಂಕ 17.04.2006.
4. ಸರ್ಕಾರಿ ಆದೇಶ ಸಂಖ್ಯೆ: ಸಿಓ 39 ಸಿಎಲ್‌ಎಸ್ 2006 ದಿನಾಂಕ 09.05.2006.
5. ಸರ್ಕಾರಿ ಆದೇಶ ಸಂಖ್ಯೆ: ಸಿಓ 186 ಸಿಎಲ್‌ಎಸ್ 2005 ದಿನಾಂಕ: 19.07.2006.
6. ಸರ್ಕಾರಿ ಆದೇಶ ಸಂಖ್ಯೆ: ಸಿಓ 39 ಸಿಎಲ್‌ಎಸ್ 2006, ದಿನಾಂಕ: 05.12.2006.
7. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಯುಬಿ1/67/ಮೀ.ಬಮನ್ನಾ/2007–08 ದಿನಾಂಕ:21.04.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮೀನುಗಾರರ ಸಹಕಾರ ಸಂಘಗಳಿಂದ/ ಸಹಕಾರ ಬ್ಯಾಂಕುಗಳಿಂದ (ಪಿಕಾರ್ಡ್ ಮತ್ತು ಡಿ.ಸಿ.ಸಿ ಬ್ಯಾಂಕುಗಳಿಂದ) ಮೀನುಗಾರಿಕೆ ಉದ್ದೇಶಗಳಿಗೆ ಪಡೆದು ದಿನಾಂಕ: 31.03.2004ಕ್ಕೆ ಹೊರಬಾಕಿಯಿರುವ ಸಾಲಗಳ ಅಸಲನ್ನು ಮೀನುಗಾರರು ದಿನಾಂಕ: 30.09.2005 ರೊಳಗೆ ಮರುಪಾವತಿ ಮಾಡಿದಲ್ಲಿ ಸದರಿ ಸಾಲಗಳ ಮೇಲಿನ ದಿನಾಂಕ: 30.09.2005 ರವರೆಗೆ ಬಾಕಿ ಇರುವ ಬಡ್ಡಿ ದಂಡದ ಬಡ್ಡಿಯನ್ನು ಮನ್ನಾ ಮಾಡಲಾಗಿದೆ. ಮೇಲೆ ಓದಲಾದ (2)ರ ಆದೇಶದಲ್ಲಿ ಮೀನುಗಾರರು ಮೀನುಗಾರರ ಸಹಕಾರ ಸಂಘಗಳಿಗೆ/ ಸಹಕಾರ ಬ್ಯಾಂಕುಗಳಿಗೆ (ಪಿಕಾರ್ಡ್ ಮತ್ತು ಡಿ.ಸಿ.ಸಿ

ಬ್ಯಾಂಕುಗಳಿಂದ) ಸಾಲಗಳ ಅಸಲನ್ನು ಮರುಪಾವತಿಸಲು ನಿಗದಿಪಡಿಸಿರುವ ಅವಧಿಯನ್ನು ದಿನಾಂಕ: 30.09.2005ರ ಬದಲಾಗಿ ದಿನಾಂಕ: 31.12.2005ರವರೆಗೆ ವಿಸ್ತರಿಸಲು ಹಾಗೂ ದಿನಾಂಕ: 01.03.2005 ರಿಂದ ದಿನಾಂಕ: 30.09.2005 ರವರೆಗಿನ ಬಡ್ಡಿ ದಂಡದ ಬಡ್ಡಿಯನ್ನು ಸರ್ಕಾರದ ವತಿಯಿಂದ ಭರಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ಮೀನುಗಾರರು ಮೀನುಗಾರ ಸಹಕಾರ ಸಂಘಗಳಿಂದ / ಸಹಕಾರ ಬ್ಯಾಂಕುಗಳಿಂದ (ಪಿಕಾರ್ಡ್ ಮತ್ತು ಡಿ.ಸಿ.ಸಿ ಬ್ಯಾಂಕುಗಳಿಂದ) ಮೀನುಗಾರಿಕೆ ಉದ್ದೇಶಗಳಿಗಾಗಿ ತೆಗೆದುಕೊಂಡ ಸಾಲಗಳ ಅಸಲನ್ನು ಮರುಪಾವತಿಸಲು ನಿಗದಿಪಡಿಸಿರುವ ಅವಧಿಯನ್ನು ದಿನಾಂಕ : 31.12.2005ರ ಬದಲಾಗಿ ದಿನಾಂಕ: 30.04.2006 ರವರೆಗೆ ವಿಸ್ತರಿಸಲು ಹಾಗೂ ದಿನಾಂಕ: 01.03.2005 ರಿಂದ ದಿನಾಂಕ 30.04.2006 ರವರೆಗಿನ ಬಡ್ಡಿ ಮತ್ತು ದಂಡದ ಬಡ್ಡಿಯನ್ನು ಸರ್ಕಾರದ ವತಿಯಿಂದಲೇ ಭರಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (4)ರ ಆದೇಶದಲ್ಲಿ ಮೀನುಗಾರರು ಮೀನುಗಾರರ ಸಹಕಾರ ಸಂಘಗಳಿಂದ / ಸಹಕಾರ ಬ್ಯಾಂಕುಗಳಿಂದ (ಪಿಕಾರ್ಡ್ ಮತ್ತು ಡಿ.ಸಿ.ಸಿ ಬ್ಯಾಂಕುಗಳಿಂದ) ಮೀನುಗಾರಿಕೆ ಉದ್ದೇಶಗಳಿಗಾಗಿ ತೆಗೆದುಕೊಂಡ ಸಾಲಗಳ ಅಸಲನ್ನು ಮರುಪಾವತಿಸಲು ನಿಗದಿಪಡಿಸಿರುವ ಅವಧಿಯನ್ನು ದಿನಾಂಕ: 31.05.2006 ರವರೆಗೆ ವಿಸ್ತರಿಸಲಾಗಿದೆ. ಮೇಲೆ ಓದಲಾದ (5)ರ ಆದೇಶದಲ್ಲಿ ಬಡ್ಡಿ ದಂಡದ ಬಡ್ಡಿ ಮನ್ನಾ ಯೋಜನೆಯನ್ನು ಮೀನುಗಾರರು ಪಟ್ಟಣ ಸಹಕಾರ ಬ್ಯಾಂಕುಗಳಿಂದ ಮೀನುಗಾರಿಕೆ ಉದ್ದೇಶಗಳಿಗಾಗಿ ತೆಗೆದುಕೊಂಡ ಸಾಲಗಳಿಗೂ ವಿಸ್ತರಿಸಲು ಹಾಗೂ ಈ ಸಾಲಗಳಿಗೆ ಸಂಬಂಧಿಸಿದಂತೆ ಮಾತ್ರ ಅಸಲನ್ನು ಮರುಪಾವತಿಸಲು ನಿಗದಿಪಡಿಸಿರುವ ಅವಧಿಯನ್ನು ದಿನಾಂಕ: 31.08.2006 ರವರೆಗೆ ವಿಸ್ತರಿಸಲು ಹಾಗೂ ದಿನಾಂಕ: 01.03.2005 ರಿಂದ ಸಾಲ ಮರುಪಾವತಿ ದಿನಾಂಕದವರೆಗಿನ ಅಂದರೆ ದಿನಾಂಕ: 31.08.2006ರವರೆಗಿನ ಬಡ್ಡಿ ಮತ್ತು ದಂಡದ ಬಡ್ಡಿಯನ್ನು ಸರ್ಕಾರದ ವತಿಯಿಂದಲೇ ಭರಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (6)ರ ಆದೇಶದಲ್ಲಿ ಮೀನುಗಾರರು ಮೀನುಗಾರರ ಸಹಕಾರ ಸಂಘಗಳಿಂದ/ ಸಹಕಾರ ಬ್ಯಾಂಕುಗಳಿಂದ (ಪಿಕಾರ್ಡ್ ಮತ್ತು ಡಿ.ಸಿ.ಸಿ ಬ್ಯಾಂಕುಗಳಿಂದ) / ಪಟ್ಟಣ ಸಹಕಾರ ಬ್ಯಾಂಕುಗಳಿಂದ ಮೀನುಗಾರಿಕೆ ಉದ್ದೇಶಗಳಿಗಾಗಿ ತೆಗೆದುಕೊಂಡ ಸಾಲಗಳ ಅಸಲನ್ನು ಮರುಪಾವತಿಸಲು ನಿಗದಿಪಡಿಸಿರುವ ಅವಧಿಯನ್ನು ದಿನಾಂಕ: 31.08.2006ರ ಬದಲಾಗಿ ದಿನಾಂಕ: 31.12.2006 ರವರೆಗೆ ವಿಸ್ತರಿಸಲು ಹಾಗೂ ಈ ಸೌಲಭ್ಯವನ್ನು ಮೀನುಗಾರರು ಮೀನುಗಾರಿಕೆ ಉದ್ದೇಶಗಳಿಗಾಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಂದ ಪಡೆದ ಸಾಲಗಳಿಗೂ ವಿಸ್ತರಿಸಲು ಹಾಗೂ ದಿನಾಂಕ: 01.03.2005 ರಿಂದ ಸಾಲ ಮರುಪಾವತಿ ದಿನಾಂಕದವರೆಗಿನ ಅಂದರೆ ದಿನಾಂಕ: 31.12.2006 ರವರೆಗಿನ ಬಡ್ಡಿ ಮತ್ತು ದಂಡದ ಬಡ್ಡಿಯನ್ನು ಸರ್ಕಾರದ ವತಿಯಿಂದಲೇ ಭರಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (7)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಮೀನುಗಾರರು ಮೀನುಗಾರಿಕೆ ಉದ್ದೇಶಗಳಿಗಾಗಿ ಅಂಕೋಲಾ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಅಂಕೋಲಾ ಹಾಗೂ ಶ್ರೀ ಯೋಧ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕುಮಟಾ ಈ ಸಂಸ್ಥೆಗಳಿಂದ ಪಡೆದ ಸಾಲಗಳ ಮೇಲಿನ ಬಡ್ಡಿ ಮತ್ತು ದಂಡದ ಬಡ್ಡಿ ಮನ್ನಾ ಮೊಬಲಗು ರೂ.3,14,986.00 ಗಳನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 62 ಸಿಎಲ್ಎಸ್ 2007, ಬೆಂಗಳೂರು, ದಿನಾಂಕ: 29ನೇ ಜೂನ್ 2009**

ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬಡ್ಡಿ ದಂಡದ ಬಡ್ಡಿ ಮನ್ನಾ ಯೋಜನೆಯಡಿ ಅಂಕೋಲಾ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಅಂಕೋಲಾ ಹಾಗೂ ಶ್ರೀ ಯೋಧ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕುಮಟಾ ಈ ಸಂಸ್ಥೆಗಳಿಗೆ ರೂ.3,14,986/– ಗಳನ್ನು (ಮೂರು ಲಕ್ಷ ಹದಿನಾಲ್ಕು ಸಾವಿರ ಒಂಬೈನೂರಾ ಎಂಬತ್ತಾರು ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"2425–00–107–2–46–ಸಾಲ ಮನ್ನಾ (ಯೋಜನೇತರ)"** ಅಡಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ವಿಭಾಗ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ ಸಹಕಾರ ಇಲಾಖೆ.

ಪಿ.ಆರ್. 1507

**ತಿದ್ದುಪಡಿ ಆದೇಶ**

**ಸಂಖ್ಯೆ :ಸಿಒ 58 ಸಿಎಲ್ಎಸ್ 2009, ಬೆಂಗಳೂರು, ದಿನಾಂಕ: 24ನೇ ಜೂನ್ 2009**

ಸರ್ಕಾರದ ಆದೇಶ ಸಂಖ್ಯೆ: ಸಿಒ 58 ಸಿಎಲ್ಎಸ್ 2007 ದಿನಾಂಕ: 06.05.2009ರ (4)ನೇ ಷರತ್ತಿನಲ್ಲಿ **"ಕಸ್ಕಾರ್ಡ್ ಬ್ಯಾಂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಗೆ ಶೇಕಡಾ 0.5ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು"** ಎಂಬುದರ ಬದಲಾಗಿ **"ಕಸ್ಕಾರ್ಡ್ ಬ್ಯಾಂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳಿಗೆ ತಾನು ನಿಗದಿಪಡಿಸುವ ಯುಕ್ತ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು"** ಎಂದು ತಿದ್ದುಪಡಿ ಮಾಡಲಾಗಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1508 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ಆರ್ಥಿಕ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಕಡ್ಡಾಯ ಜೀವ ವಿಮಾ ಯೋಜನೆಯ ದಿ: 1.4.2004ರಿಂದ 31.3.2006ಕ್ಕೆ ಅಂತ್ಯಗೊಂಡ ದ್ವೈವಾರ್ಷಿಕ ಅವಧಿಯ ಮೌಲ್ಯಮಾಪನ ವರದಿಯ ಮೇಲೆ ಜೀವ ವಿಮಾ ಪಾಲಿಸಿಗಳ ಸ್ಥಿರಪಡಿಸಿದ ಮೊತ್ತದ ಮೇಲೆ ಬೋನಸ್ ನೀಡಲು ಮಂಜೂರಾತಿ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ:ಆಇ 62 ಕವಿಇ 2008, ದಿನಾಂಕ: 25.09.2008.

2) ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ವಿನಿ.ವಿಗಸಾ/Avg/805/2008–09, ದಿನಾಂಕ: 05.09.2008, ಪತ್ರ ಸಂಖ್ಯೆ: ವಿಮಾ/ವಿಗಸಾ/1309/2008–09, 19.02.2009 ಮತ್ತು ಅ.ಸ. ಪತ್ರ ಸಂಖ್ಯೆ.AVG/30/2008–09, ದಿನಾಂಕ: 21.04.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ 2004–2006ನೇ ದ್ವೈವಾರ್ಷಿಕ ಅವಧಿಯ ವಿಮಾ ಗಣನಾ ಕಾರ್ಯವನ್ನು ಶ್ರೀ ಕೆ.ವಿ.ವೈ.ಶಾಸ್ತ್ರಿ, ಕನ್ಸಲ್ಟಿಂಗ್ ಅಕ್ಚುಯರಿ, ಹೈದರಾಬಾದ್, ಇವರಿಗೆ ವಹಿಸಲು ಆದೇಶಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ನಿರ್ದೇಶಕರು 2004–2006ನೇ ದ್ವೈವಾರ್ಷಿಕ ಅವಧಿಯ ಕಡ್ಡಾಯ ಜೀವ ವಿಮಾ ಪಾಲಿಸಿಗಳ ಮೌಲ್ಯ ಮಾಪನ ಮಾಡಿದ ವರದಿಯನ್ನು ಕಳುಹಿಸಿ ಇದನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿದ್ದಾರೆ. ಮೌಲ್ಯ ಮಾಪನ ವರದಿಯ ಪ್ರಮುಖ ಅಂಶಗಳು ಈ ಕೆಳಕಂಡಂತೆ ಇದೆ.

**(1) ವಿಮಾ ವ್ಯವಹಾರದ ಮಾಹಿತಿ:**

| ವಿವರಗಳು | | ಅವಧಿ | |
|---|---|---|---|
| | | 2002–04 | 2004–06 |
| ಎ) | ಚಾಲ್ತಿಯಲ್ಲಿರುವ ಪಾಲಿಸಿಗಳ ಸಂಖ್ಯೆ: | 10,81,293 | 10,27,292 |
| | | | (ಕೋಟಿ ರೂ.ಗಳಲ್ಲಿ) |
| ಬಿ) | ವಿಮಾ ಮೊಬಲಗು | 4185.47 | 4658.29 |
| ಸಿ) | ಅಧಿಲಾಭಾಂಶ | 2137.84 | 2528.76 |
| ಡಿ) | ವಾರ್ಷಿಕ ವಿಮಾ ಕಂತು ಆದಾಯ | 209.94 | 223.66 |
| ಇ) | ವಿಮಾ ನಿಧಿಯ ಶಿಲ್ಕು | 2524.86 | 3114.40 |

(2) 2004–2006ನೇ ಸಾಲಿನಲ್ಲಿ ವಿಮಾ ಗಣನೆಯ ನಂತರ ಹೆಚ್ಚುವರಿ ಮೊತ್ತ (ಟೋಟಲ್ ಸರ್ ಪ್ಲಸ್) ರೂ.123.9539 ಕೋಟಿಗಳಾಗಿದ್ದು, ಈ ಮೊತ್ತವು 2002–2004ರ ಮೌಲ್ಯಮಾಪನ ವರದಿಯ ಅಂತ್ಯಕ್ಕೆ ರೂ.237.1868 ಕೋಟಿಯಷ್ಟಿತ್ತು.

(3) ವಿಮಾ ಕಂತಿನ ಆದಾಯಕ್ಕನುಗುಣವಾಗಿ 2004–2006ನೇ ಮೌಲ್ಯಮಾಪನ ಅವಧಿಗೆ ವೆಚ್ಚದ ಅನುಪಾತ ಶೇ.4.28 ಆಗಿದ್ದು, ಈ ವೆಚ್ಚವು 2002–2004ರ ಅಂತ್ಯಕ್ಕೆ ಶೇ.4.76 ಆಗಿದ್ದಿತು.

(4) ವಿಮಾ ನಿಧಿಯು 2004–2005ರಲ್ಲಿ ಶೇ.8.91 ಹಾಗೂ 2005–2006 ನೇ ಸಾಲಿನಲ್ಲಿ ಶೇ.8.43 ಬಡ್ಡಿಯನ್ನು ಗಳಿಸಿದ್ದು, ಈ ದರವು 2002–2003ರಲ್ಲಿ 9.36 ಹಾಗೂ 2003–2004ರಲ್ಲಿ 8.52ರ ದರದಲ್ಲಿತ್ತು.

(5) ವಿಮಾಗಣನಾ ಕಾರ್ಯಕ್ಕೆ ಅಳವಡಿಸಿಕೊಂಡ ಮಾರ್ಟಾಲಿಟಿ ಕೋಷ್ಟಕದಂತೆ ವಾಸ್ತವ ಮರಣಗಳಲ್ಲಿ ಹಾಗೂ ನಿರೀಕ್ಷೆಯ ಮರಣಗಳ ಮೇಲಿನ ಅನುಪಾತ 2004–2006ಕ್ಕೆ ಶೇ.75.59 ಇದ್ದು, ಈ ಅನುಪಾತವು 2002–2004ರ ಅವಧಿಗೆ ಶೇ.77.20 ಎಂಬುದಾಗಿ ಕಂಡುಬಂದಿದೆ.

ಮುಂದುವರೆದು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ನಿರ್ದೇಶಕರು ಮೇಲಿನ ಅಂಶಗಳ ಆಧಾರದ ಮೇಲೆ 2004–2006ರ ದ್ವೈವಾರ್ಷಿಕ ಅವಧಿಯಲ್ಲಿ ಚಾಲ್ತಿಯಲ್ಲಿರುವ ಎಲ್ಲಾ ಪಾಲಿಸಿಗಳಿಗೆ ಪ್ರತಿ ರೂ. 1000–00ಗಳಿಗೆ ಪ್ರತಿ ವರ್ಷಕ್ಕೆ ರೂ.75–00ರ ಅಧಿಲಾಭಾಂಶವನ್ನೂ ಹಾಗೂ 01.04.2006 ರಿಂದ 31.03.2008ರ ಅವಧಿಯಲ್ಲಿ ಫಲಪ್ರದ, ಮರಣಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ಹೊರಹೋಗಿರುವ ಪಾಲಿಸಿಗಳಿಗೆ ಪ್ರತಿ ರೂ.1000–00ಗಳಿಗೆ ವಾರ್ಷಿಕ ರೂ.75–00 ಮಧ್ಯಂತರ ಲಾಭಾಂಶವನ್ನು ನೀಡಬಹುದಾಗಿದೆ ಎಂದು ವಿಮಾಗಣಕರು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿದ್ದಾರೆ.

ಮುಂದುವರೆದು, ಮೇಲ್ಕಂಡ ವಿಮಾ ಗಣಕರ ಶಿಫಾರಸ್ಸನ್ನು ಒಪ್ಪಿ ಈ ಕೆಳಕಂಡ ಪ್ರಸ್ತಾವನೆಗಳಿಗೆ ಸರ್ಕಾರದ ಆದೇಶವನ್ನು ನೀಡಬೇಕೆಂದು ನಿರ್ದೇಶಕರು ಕೋರಿದ್ದಾರೆ.

1. ದಿನಾಂಕ: 01.04.2004 ರಿಂದ 31.03.2006ರ ದ್ವೈವಾರ್ಷಿಕ ಮೌಲ್ಯಮಾಪನ ಅವಧಿಯಲ್ಲಿ ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ ಹಾಗೂ ಚಾಲ್ತಿಯಲ್ಲಿದ್ದ ಪ್ರತಿ ತಿಂಗಳ ಅವಧಿಯನ್ನು ಒಳಗೊಂಡಂತೆ ಪಾಲಿಸಿಗಳ ಸ್ಥಿರಪಡಿಸಿದ ವಿಮಾ ಮೊತ್ತದ ಮೇಲೆ ಪ್ರತಿ ರೂ.1000–00ಗಳಿಗೆ ವಾರ್ಷಿಕ ರೂ. 75–00ರಂತೆ ಸಾಮಾನ್ಯ ಪ್ರತ್ಯಾವರ್ತಿ ಲಾಭಾಂಶ (ಸಿಂಪಲ್ ರಿವರ್ಶನರಿ ಬೋನಸ್) ಘೋಷಿಸುವುದು.

2. ಅವಧಿಪೂರ್ಣ, ಮರಣಜನ್ಮ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ದಿನಾಂಕ: 01.04.2006 ರಿಂದ 31.03.2008ರ ಅವಧಿಯಲ್ಲಿ ಹೊರಹೋಗಿರುವ ವಿಮಾ ಪಾಲಿಸಿಗಳಿಗೆ ಅಂದರೆ ಮುಂದಿನ ಮೌಲ್ಯಮಾಪನ ದಿನಾಂಕದವರೆವಿಗೂ ಪ್ರತಿ ರೂ.1000–00ಗಳಿಗೆ ವಿಮಾ ಮೊತ್ತಕ್ಕೆ ವಾರ್ಷಿಕ ರೂ.75–00ರಂತೆ ಮಧ್ಯಂತರ ಲಾಭಾಂಶವನ್ನು (ಇಂಟೀರಿಯಂ ಬೋನಸ್) ಘೋಷಿಸುವುದು.

**ಸರ್ಕಾರಿ ಆದೇಶ ಸಂಖ್ಯೆ: ಆಇ 62 ಕವಿಇ 2008, ಬೆಂಗಳೂರು, ದಿನಾಂಕ: 30ನೇ ಮೇ 2009**

ಸರ್ಕಾರವು ವಿಮಾ ಗಣನಾ ವರದಿ ಹಾಗೂ ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರ ಶಿಫಾರಸ್ಸನ್ನು ವಿವರವಾಗಿ ಪರಿಶೀಲಿಸಿ ಈ ಕೆಳಕಂಡ ಅಂಶಗಳಿಗೆ ಸರ್ಕಾರ ಮಂಜೂರಾತಿಯನ್ನು ನೀಡಿದೆ.

1) ದಿನಾಂಕ: 31.03.2006 ರಂದು ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ 2004–2006ರ ದ್ವೈವಾರ್ಷಿಕ ಅವಧಿಯಲ್ಲಿ ವಿಮಾ ಮೊತ್ತದ ಪ್ರತಿ ರೂ.1000–00ಗಳಿಗೆ ವಾರ್ಷಿಕ ರೂ.75–00 ಬೋನಸ್ ನೀಡತಕ್ಕದ್ದು.

2) ದಿನಾಂಕ: 01.04.2006 ರಿಂದ 31.03.2008ರ ಅವಧಿಯಲ್ಲಿ ಅವಧಿಪೂರ್ಣತೆ, ಮರಣ ಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ಹೊರಹೋಗಿರುವ ವಿಮಾ ಪಾಲಿಸಿಗಳಿಗೆ ಮುಂದಿನ ಮೌಲ್ಯಮಾಪನ ದಿನಾಂಕದವರೆಗೆ ಪ್ರತಿ ರೂ.1000–00ಗಳಿಗೆ ವಾರ್ಷಿಕ ರೂ.75–00 ಮಧ್ಯಂತರ ಬೋನಸ್ಸನ್ನು ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶ್ರೀನಿವಾಸಮೂರ್ತಿ**

ಪಿ.ಆರ್. 1513

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸುಗಳ ಅನುಷ್ಠಾನ – ನಿವೃತ್ತ ನ್ಯಾಯಾಂಗ ಅಧಿಕಾರಿಗಳಿಗೆ ಸೌಲಭ್ಯ ವಿಸ್ತರಿಸಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಲಾ 124 ಎಲ್‌ಸಿಎಲ್ 1997 ದಿನಾಂಕ 04.02.2004.

2) ಸರ್ಕಾರದ ಆದೇಶ ಸಂಖ್ಯೆ:ಆಇ (ಎಸ್‌ಪಿಎಲ್) 03 ಪಿಇಎನ್ 2007 (II) ದಿನಾಂಕ 06.06.2007

3) ಕರ್ನಾಟಕ ರಾಜ್ಯ ನಿವೃತ್ತ ನ್ಯಾಯಾಂಗ ಅಧಿಕಾರಿಗಳ ಸಂಘ ಬೆಂಗಳೂರು ಇವರ ಮನವಿ ದಿನಾಂಕ:11.07.2007 ಮತ್ತು 12.09.2007.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶ (1)ರಲ್ಲಿ ಸರ್ಕಾರವು ನಿವೃತ್ತ ನ್ಯಾಯಾಂಗ ಅಧಿಕಾರಿಗಳಿಗೆ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡುವುದರೊಂದಿಗೆ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನವನ್ನು ಪರಿಷ್ಕರಣೆ ಮಾಡಿ ಆದೇಶ ಹೊರಡಿಸಿದೆ. ಓದಲಾದ ಕ್ರಮಸಂಖ್ಯೆ (2)ರಲ್ಲಿನ ಆದೇಶದಲ್ಲಿ ಸರ್ಕಾರವು 5ನೇ ವೇತನ ಆಯೋಗ ಶಿಫಾರಸ್ಸಿನನ್ವಯ ರಾಜ್ಯ ಸರ್ಕಾರಿ ನೌಕರರ ನಿವೃತ್ತಿ ಸೌಲಭ್ಯಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಿದೆ. ಆದರೆ ಈ ಆದೇಶ ವ್ಯಾಪ್ತಿಯಿಂದ ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯ ನ್ಯಾಯಾಂಗ ಅಧಿಕಾರಿಗಳನ್ನು ಹೊರತುಪಡಿಸಲಾಗಿದೆ. ಮೇಲೆ ಓದಲಾದ (3)ರಲ್ಲಿ ಕರ್ನಾಟಕ ರಾಜ್ಯ ನಿವೃತ್ತ ನ್ಯಾಯಾಂಗ ಅಧಿಕಾರಿಗಳ ಸಂಘ ಬೆಂಗಳೂರು ಇವರು ಸರ್ಕಾರಕ್ಕೆ ದಿನಾಂಕ 11.07.2007ರಂದು ಹಾಗೂ 12.09.2007ರಂದು

ಮನವಿಯನ್ನು ನೀಡಿ, ಈ ಸೌಲಭ್ಯವನ್ನು ಸಹ ದಿನಾಂಕ 01.04.2004 ರಿಂದ ಜಾರಿಗೆ ಬರುವಂತೆ ಎಫ್‌ಎನ್‌ಜಿಪಿಸಿ ವೇತನ ಶ್ರೇಣಿಯ ನ್ಯಾಯಾಂಗ ಅಧಿಕಾರಿಗಳಿಗೆ ನಿವೃತ್ತಿ ವೇತನ/ ಕುಟುಂಬ ನಿವೃತ್ತಿ ವೇತನ ಪಡೆಯುವವರಿಗೆ ನೀಡುವಂತೆ ಕೋರಿರುತ್ತಾರೆ. ಆದ್ದರಿಂದ ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 277 ಎಲ್‌ಎಸಿ 2008 ಬೆಂಗಳೂರು, ದಿನಾಂಕ: 3ನೇ ಜೂನ್ 2009.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಎಫ್‌ಎನ್‌ಜಿಪಿಸಿ ವೇತನ ಶ್ರೇಣಿಯ ನಿವೃತ್ತ ನ್ಯಾಯಾಂಗ ಅಧಿಕಾರಿಗಳಿಗೆ ಈ ಕೆಳಕಂಡ ಸವಲತ್ತುಗಳನ್ನು ಮಂಜೂರು ಮಾಡಿದೆ.

1) ದಿನಾಂಕ 01.04.2004 ರಿಂದ ಜಾರಿಗೆ ಬರುವಂತೆ ನ್ಯಾಯಾಂಗ ಇಲಾಖೆಯ ಅಧಿಕಾರಿಗಳ ನಿವೃತ್ತಿ ವೇತನದ ಮೇಲೆ ನೀಡಲಾಗುತ್ತಿದ್ದ ತುಟ್ಟಿಭತ್ಯೆಯ ಶೇಕಡ 50 ರಷ್ಟನ್ನು ಮೂಲ ನಿವೃತ್ತಿ ವೇತನದೊಂದಿಗೆ ವಿಲೀನಗೊಳಿಸುವುದು; ಮತ್ತು ವಿಲೀನಗೊಳಿಸಿದ ಮೊತ್ತವನ್ನು ಪ್ರತ್ಯೇಕವಾಗಿ ತೋರಿಸುವುದು;

2) ದಿನಾಂಕ 01.07.2005ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ ನೀಡಲಾಗುವ ಉಪದಾನ ಮತ್ತು ಕುಟುಂಬ ನಿವೃತ್ತಿ ವೇತನ ಪರಿಷ್ಕೃತ ದರಗಳನ್ನು ನ್ಯಾಯಾಂಗ ಇಲಾಖೆಯ ಅಧಿಕಾರಿಗಳಿಗೂ ವಿಸ್ತರಿಸುವುದು. ದಿನಾಂಕ 01.07.2005 ರಿಂದ ದಿನಾಂಕ 31.03.2006 ರವರೆಗಿನ ಅವಧಿಗೆ ಕೇವಲ ಕಾಲ್ಪನಿಕ ಹೆಚ್ಚಳ ನೀಡಲಾಗಿದ್ದು, ಅದರಿಂದ ಯಾವುದೇ ಆರ್ಥಿಕ ಸೌಲಭ್ಯ ಈ ಅವಧಿಗೆ ಲಭ್ಯವಾಗುವುದಿಲ್ಲ. ದಿನಾಂಕ 01.04.2006 ರಿಂದ ಬಾಕಿಯನ್ನು ಈ ಕೂಡಲೇ ನೀಡುವುದು.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 03 ಪಿಇಎನ್ 07(1) ದಿನಾಂಕ 06.06.2007ನ್ನು ಎಫ್‌ಎನ್‌ಜಿಪಿಸಿ ವೇತನ ಶ್ರೇಣಿಗಳಲ್ಲಿ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನ ಪಡೆಯುವವರಿಗೆ ಸಂಬಂಧಿಸಿದಂತೆ ತಿದ್ದುಪಡಿ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ (ವಿ)25ಪಿಇಎನ್ 2008, ದಿನಾಂಕ 29.05.2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಸಿದ್ದಲಿಂಗೇಶ್**

ಪಿ.ಆರ್. 1514

ಸರ್ಕಾರದ ಕಾರ್ಯದರ್ಶಿಗಳು,

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ:** ದಿನಾಂಕ:31.03.2009ರೊಳಗೆ ನಡೆಸಬೇಕಾಗಿರುವ ನ್ಯಾಯಾಂಗ ಇಲಾಖೆ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 47 ಸಿಎಲ್‌ಎಂ 2009, ದಿನಾಂಕ: 04.03.2009.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 47 ಸಿಎಲ್‌ಎಂ 2009, ದಿನಾಂಕ: 13.05.2009.
3. ನ್ಯಾಯಾಂಗ ಇಲಾಖೆ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ವ್ಯವಸ್ಥಾಪಕರ ದಿನಾಂಕ:23.05.2009ರ ಮನವಿ.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 47 ಸಿಎಲ್‌ಎಂ 2009, ದಿನಾಂಕ:04.03.2009ರ ಆದೇಶದಲ್ಲಿ ನಿಗದಿಪಡಿಸದ ಕಾಲಮಿತಿಯೊಳಗೆ ಮತ್ತು ಆ ಅನುಕ್ರಮದಲ್ಲಿ 2009–10ರಿಂದ ಐದು ವರ್ಷದ ಅವಧಿಗೆ ಆಡಳಿತ ಸಮಿತಿಗೆ ಚುನಾವಣೆ ನಡೆಸಬೇಕಾದ ಸಹಕಾರ ಸಂಘಗಳಿಗೆ ಚುನಾವಣೆಯನ್ನು ನಡೆಸತಕ್ಕದ್ದೆಂದು ಆದರೆ, ದಿನಾಂಕ: 04.03.2009ಕ್ಕೆ ಹಿಂದೆ ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿದ್ದು ಚುನಾವಣೆಯು ಮುಕ್ತಾಯವಾಗದಿದ್ದ ಸಂದರ್ಭಗಳಲ್ಲಿ ಮಾತ್ರ ದಿನಾಂಕ:04.03.2009ರಲ್ಲಿದ್ದಂತೆ ಚುನಾವಣಾ ವೇಳಾ ಪಟ್ಟಿಯ ಯಾವ ಹಂತದಲ್ಲಿ ಚುನಾವಣಾ ಪ್ರಕ್ರಿಯೆಯನ್ನು ನಿಲ್ಲಿಸಲಾಗಿತ್ತೋ ಆ ಹಂತದಿಂದ ಚುನಾವಣಾ ಪ್ರಕ್ರಿಯೆಯನ್ನು ಮುಂದುವರಿಸಿ ದಿನಾಂಕ:04.03.2009ರ ಆದೇಶದಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಮತ್ತು ಆ ಅನುಕ್ರಮದಲ್ಲಿ ಚುನಾವಣೆಯನ್ನು ಮುಕ್ತಾಯಗೊಳಿಸತಕ್ಕದ್ದೆಂದು ಆದೇಶಿಸಿರುತ್ತದೆ. ಮೇಲೆ ಓದಲಾದ (3)ರ ಮನವಿಯಲ್ಲಿ ನ್ಯಾಯಾಂಗ ಇಲಾಖೆ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದು ಮೈಸೂರು ರಸ್ತೆಯಲ್ಲಿ ಸಂಘದ ನಿವೇಶನ ರಹಿತ ಸದಸ್ಯರಿಗಾಗಿ 16 ಎಕರೆ 15 ಗುಂಟೆ ಬಡಾವಣೆಯನ್ನು ನಿರ್ಮಿಸಿ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡುವ ಕಾರ್ಯ ನಡೆಯುತ್ತಲಿದ್ದು ಈ ಸಂದರ್ಭದಲ್ಲಿ ಚುನಾವಣೆ ನಡೆದು ಆಡಳಿತ ಮಂಡಳಿಯಲ್ಲಿ ಬದಲಾವಣೆಗಳಾದಲ್ಲಿ ಸದಸ್ಯರ ಹಿತಾಸಕ್ತಿಗೆ ಧಕ್ಕೆಯಾಗುವ ಸಂಭವವಿರುವುದನ್ನು ಮತ್ತು ಲೆಕ್ಕಪರಿಶೋಧನಾ

ಕಾರ್ಯಕ್ಕೆ ಸಹಾಯಕಾರಿ ಆಗಲೆಂಬ ಅಂಶಗಳನ್ನು ಪರಿಗಣಿಸಿ ಹಾಗೂ ಸಂಘಕ್ಕೆ ಹೆಚ್ಚುವರಿ ಖರ್ಚಿನ ಆರ್ಥಿಕ ಹೊರೆಯನ್ನು ತಪ್ಪಿಸುವ ದೃಷ್ಟಿಯಿಂದ ಸಂಘದ ಆಡಳಿತ ಸಮಿತಿಯ ಚುನಾವಣೆಯನ್ನು 6 ತಿಂಗಳ ಕಾಲ ಮುಂದೂಡಬೇಕೆಂದು ಕೋರಿರುತ್ತದೆ.

ಸದರಿ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 30 ಸಿಎಲ್ಎಂ 2009, ದಿನಾಂಕ: 16ನೇ ಜೂನ್ 2009**

ಮೇಲಿನ ಪರಿಸ್ಥಿತಿಯಲ್ಲಿ ನ್ಯಾಯಾಂಗ ಇಲಾಖೆ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಒ 47 ಸಿಎಲ್ಎಂ 2009, ದಿನಾಂಕ:04.03.2009 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು 30.09.2009ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:** ಪ್ರಕರಣ 28ಎ(4) 28ಎ(5), 28ಬಿ(2) 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30.09.2009 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1534

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎಂ.ವಿರುಪಾಕ್ಷಗೌಡ, ಹಿರಿಯಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇವರನ್ನು ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ:** 1) ನಿರ್ದೇಶಕರು, ಗಣಿ ಭೂವಿಜ್ಞಾನ ಇಲಾಖೆ, ಇವರ ಅ.ಸ.ಪತ್ರ ಸಂಖ್ಯೆ:ಗಭೂಇ/ಆ.ಶಾ./2009–10, ದಿನಾಂಕ:06.04.2009.

**ಪ್ರಸ್ತಾವನೆ:**

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ದಿ:04.04.09ರಂದು ಶಿವಮೊಗ್ಗ ಜಿಲ್ಲೆಯಲ್ಲಿ ನಡೆಯುತ್ತಿರುವ ಅಕ್ರಮ ಮರಳು ಸಾಗಾಣಿಕೆ ಹಾಗೂ ಉಚ್ಚ ನ್ಯಾಯಾಲಯದಲ್ಲಿನ ಕೆಲವು ಮೊಕದ್ದಮೆಗಳ ಕುರಿತಂತೆ ಮಾತನಾಡುವ ಸಲುವಾಗಿ ಶ್ರೀ ಎಂ.ವಿರುಪಾಕ್ಷಗೌಡ, ಹಿರಿಯಭೂವಿಜ್ಞಾನಿ(ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇವರನ್ನು ಸಂಪರ್ಕಿಸಲು, ಶಿವಮೊಗ್ಗದಲ್ಲಿನ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕಛೇರಿಯನ್ನು ದೂರವಾಣಿಯ ಮೂಲಕ ಸಂಪರ್ಕಿಸಿದ್ದು, ಶ್ರೀ ಎಂ.ವಿರುಪಾಕ್ಷಗೌಡ, ಹಿರಿಯಭೂವಿಜ್ಞಾನಿ(ಖನಿಜ), ಇವರು ಯಾವುದೇ ಮಾಹಿತಿಯನ್ನು ನೀಡದೇ ಕೇಂದ್ರಸ್ಥಾನವನ್ನು ಬಿಟ್ಟು ಹೋಗಿರುತ್ತಾರೆಂದೂ, ಸದರಿ ಅಧಿಕಾರಿಯನ್ನು ಮೊಬೈಲ್ ದೂರವಾಣಿಯ ಮೂಲಕ ಸಂಪರ್ಕಿಸಲು ಪ್ರಯತ್ನಿಸಿದಾಗ, ಮೊಬೈಲ್ ಅನ್ನು ಸ್ವಿಚ್ ಆಫ್ ಮಾಡಿರುತ್ತಾರೆಂದು, ಪ್ರಸ್ತುತ ಲೋಕಸಭಾ ಚುನಾವಣೆಯ ಸಿದ್ಧತೆಗಳು ನಡೆಯುತ್ತಿದ್ದು, ಇಲಾಖೆಯ ಜಿಲ್ಲಾ ಮುಖ್ಯಸ್ಥರಾದ ಶ್ರೀ ಎಂ.ವಿರೂಪಾಕ್ಷಗೌಡ, ಹಿರಿಯ ಭೂವಿಜ್ಞಾನಿ(ಖನಿಜ), ಇವರು ಯಾವುದೇ ಕಾರಣಕ್ಕೂ ಮೇಲಾಧಿಕಾರಿಯ ಪೂರ್ವಾನುಮತಿ ಪಡೆಯದೇ ಕೇಂದ್ರಸ್ಥಾನವನ್ನು ಬಿಡಬಾರದೆಂದು ತಿಳಿದಿದ್ದರೂ, ನಿರ್ದೇಶಕರ ಪೂರ್ವಾನುಮತಿ ಪಡೆಯದೆ, ತಮ್ಮ ಕಛೇರಿಯಲ್ಲಿ ತಮ್ಮ ಚಲನವಲನದ ಬಗ್ಗೆ ಯಾವುದೇ ಮಾಹಿತಿ ನೀಡದೇ, ಕೇಂದ್ರಸ್ಥಾನವನ್ನು ಬಿಟ್ಟು ಹೋಗಿರುತ್ತಾರೆಂದು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ ಓದಲಾದ ದಿ:06.04.09 ರ ಅರೆ ಸರ್ಕಾರಿ ಪತ್ರದಲ್ಲಿ ತಿಳಿಸಿರುತ್ತಾರೆ.

ಅಲ್ಲದೇ, ದಿ:04.04.09 ರಂದು ಮತ್ತು ದಿ:05.04.09 ರಂದು ಶ್ರೀ ಎಂ.ವಿರುಪಾಕ್ಷಗೌಡ ಇವರ ಮೊಬೈಲ್ ದೂರವಾಣಿಯನ್ನು ಸಂಪರ್ಕಿಸಲು ಯತ್ನಿಸಿದಾಗ ಸ್ವಿಚ್ ಆಫ್ ಮಾಡಿರುತ್ತಾರೆಂದು, ದಿ:05.04.09 ರಂದು ತುರ್ತಾಗಿ ನಿರ್ದೇಶಕರನ್ನು ಸಂಪರ್ಕಿಸುವಂತೆ ಮೊಬೈಲ್ ಮುಖಾಂತರ ಸಂದೇಶ ಕಳುಹಿಸಿದ್ದರೂ ಸಹ ಸಂಪರ್ಕಿಸಿಲ್ಲವೆಂದು ತಿಳಿಸುತ್ತಾ, ಜಿಲ್ಲೆಯಲ್ಲಿ ಅನಧಿಕೃತವಾಗಿ ಮರಳು ಗಣಿಗಾರಿಕೆ/ಸಾಗಾಣಿಕೆ ನಡೆಯುತ್ತಿದ್ದರೂ ಸಹ ಅದನ್ನು ತಡೆಗಟ್ಟಲು ಯಾವುದೇ ಕ್ರಮ

ಕೈಗೊಂಡಿರುವುದಿಲ್ಲವಲ್ಲದೇ, ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷ್ಯ ತೋರಿಸಿರುವುದರಿಂದ, ಇವರು ಸರ್ಕಾರಿ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಅಸಮರ್ಥರಾಗಿರುವುದರಿಂದ, ಶ್ರೀ ಎಂ.ವಿರೂಪಾಕ್ಷಗೌಡ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇವರನ್ನು ಅಮಾನತ್ತಿನಲ್ಲಿಡಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ ಓದಲಾದ ದಿ:06.04.09 ಅರೆ ಸರ್ಕಾರಿ ಪತ್ರದಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಐ.39.ಎಂಜಿಎಸ್.2009, ಬೆಂಗಳೂರು, ದಿನಾಂಕ: 30ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಎಂ.ವಿರುಪಾಕ್ಷಗೌಡ, ಹಿರಿಯಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ, ಶ್ರೀ ಎಂ.ವಿರುಪಾಕ್ಷಗೌಡ, ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ.ವಿರುಪಾಕ್ಷಗೌಡ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1538

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)ಬಿಡಿ–40/ಸಿ.ಆರ್.–7/2008/ಸಿ.ಬಿ.ಪುರ, ದಿನಾಂಕ:11.07.2008.
2. ಸರ್ಕಾರಿ ಆದೇಶ ಸಂಖ್ಯೆ: ಆಇ 47 ವಾತೆತ 2008, ದಿನಾಂಕ:19.08.2008.
3. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಬಿಡಿ–40/ಸಿ.ಆರ್.–7/2008/ಸಿ.ಬಿ.ಪುರ, ದಿನಾಂಕ:30.04.2009
4. ತನಿಖಾಧಿಕಾರಿಯ ವರದಿ ಸಂಖ್ಯೆ: ಲೋಕ್/ಸಿಬಿಪಿ/ಡಿಎಸ್‌ಪಿ/ಸಿಆರ್–07/2008, ದಿನಾಂಕ:30.01.09, ಪೊಲೀಸ್ ಉಪ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ ಜಿಲ್ಲೆ.
5. ತನಿಖಾ ದಾಖಲೆಗಳಾದ ಫಿರಿಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು. ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1)ರ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರ ಶಿಫಾರಸ್ಸಿನ ಮೇರೆಗೆ ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿ ಇವರ ವಿರುದ್ಧದ ಲಂಚ ಪ್ರಕರಣಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಅದರಿ ಅಧಿಕಾರಿಯನ್ನು ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಕೆ. ದೊರೈ, ವಾಣಿಜ್ಯ ತೆರಿಗೆ ಅಧಿಕಾರಿ ಇವರ ವಿರುದ್ಧ ಗುನ್ನೆ ಸಂಖ್ಯೆ:07/2008 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿ ಅಂತಿಮ ವರದಿ ಮತ್ತು ದಾಖಲಾತಿಗಳನ್ನು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ:30.04.2009 ರೊಡನೆ ಕಳುಹಿಸುತ್ತಾ ಆಪಾಧಿತ ಅಧಿಕಾರಿಯನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯಿದೆ, 1988ರ 19ನೇ ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಉಲ್ಲೇಖ (3)ರ ಪತ್ರದಲ್ಲಿ ಕಳುಹಿಸಿಕೊಟ್ಟಿರುವ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿರುತ್ತದೆ:

1. ಶ್ರೀ ಎಸ್.ರಾಘವೇಂದ್ರ, ಇಂಡಿಯನ್ ಮದ್ರಾಸ್ ಮೋಟಾರ್ಸ್ ಅಂಗಡಿಯ ಮಾಲೀಕರು, ಚೇಳೂರು ರಸ್ತೆ, ಚಿಂತಾಮಣಿ ರವರ ಲಿಖಿತ ದೂರು ದಿನಾಂಕ:16.06.2008.
2. ಪ್ರಥಮ ವರ್ತಮಾನ ವರದಿ ಚಿಕ್ಕಬಳ್ಳಾಪುರ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ:07/2008, ದಿನಾಂಕ:16.06.2008.
3. ಪ್ರಾಯೋಗಿಕ ಪಂಚನಾಮೆ ದಿನಾಂಕ:16.06.2008
4. ಟ್ರ್ಯಾಪ್ ನ ಮಹಜರ್ ದಿನಾಂಕ:16.06.2008.
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ:ಪಿಹೆಚ್ಐ/ಸಿಎಂಇ/ಲೋಕ್/42/08–09, ದಿನಾಂಕ:23.08.2008.
6. ಕೃತ್ಯ ನಡೆದ ಸ್ಥಳದ ನಕಾಶೆ 2008–09/232, ದಿನಾಂಕ:04.09.2008.
7. **ಸಾಕ್ಷಿಗಳ ಹೇಳಿಕೆಗಳು:**
    1. ಶ್ರೀ ಎಸ್.ರಾಘವೇಂದ್ರ ಬಿನ್ ಎನ್.ಸುಬ್ರಮಣ್ಯಂ
    2. ಶ್ರೀ ಆವಲಪ್ಪ ಬಿನ್ ಲೇಟ್ ತಾಯಪ್ಪ.
    3. ಶ್ರೀ ಟಿ.ನಾಗರಾಜ ಬಿನ್ ವೆಂಕಟರಾಯಪ್ಪ
    4. ಶ್ರೀ ಸಿ.ಎನ್.ನಾಗರಾಜ ರಾವ್ ಬಿನ್ ಲೇಟ್ ಲಕ್ಷ್ಮಿನಾರಾಯಣ ರಾವ್.
    5. ಶ್ರೀ ಎಸ್. ಜಯರಾಮ್ ಬಿನ್ ಲೇಟ್ ಆರ್.ಸಣ್ಣಯ್ಯ.
    6. ಶ್ರೀ ಬಿ.ಎಂ.ಮಂಜುನಾಥ ಸ್ವಾಮಿ ಬಿನ್ ಬಿ.ಎಂ.ಮುನಿಯಪ್ಪ.
    7. ಶ್ರೀ ಎಂ.ರಾಜಣ್ಣ @ ಡ್ರೈವರ್ ರಾಜು ಬಿನ್ ಮುನಿಚೌಡಪ್ಪ.
    8. ಶ್ರೀ ಎಂ.ವಿ.ಪ್ರಸಾದ್, ಸಹಾಯಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಚಿಂತಾಮಣಿ ಉಪವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ
    9. ಡಾ: ಕೆ.ಆರ್.ರೇಖಾ, ರಾಸಾಯನಿಕ ಪರೀಕ್ಷಾ ತಜ್ಞರು, ಕೆ.ಆರ್.ವೃತ್ತ ಬೆಂಗಳೂರು.
    10. ಶ್ರೀ ಸೈಯದ್ ಹಾಜಿ, ಮುಖ್ಯ ಪೇದೆ.
    11. ಶ್ರೀ ಕೆ.ಆರ್.ಪ್ರತಾಪ್, ಮುಖ್ಯ ಪೇದೆ.
    12. ಶ್ರೀ ಎಂ.ರಾಮಚಂದ್ರ, ಪೇದೆ.
    13. ಶ್ರೀ ಕೆ.ಆರ್.ನಾಗರಾಜ, ಪೇದೆ.
    14. ಶ್ರೀ ಶಿವಣ್ಣ, ಪೇದೆ.
    15. ಶ್ರೀ ಶ್ರೀನಿವಾಸ್, ಎ.ಪಿ.ಸಿ
    16. ಶ್ರೀ ಎಂ.ಸಿ.ಬೂದಿಹಾಳ್, ಪೊಲೀಸ್ ಉಪ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ.
8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ.

**ವಿಷಯ:** ಫಿರ್ಯಾದುದಾರರಾದ ಶ್ರೀ ಎಸ್. ರಾಘವೇಂದ್ರ ಇವರ ಬಾಬತ್ತು ಚೇಳೂರು ರಸ್ತೆಯಲ್ಲಿರುವ ಇಂಡಿಯನ್ ಮದ್ರಾಸ್ ಮೋಟಾರ್ಸ್ ಬಿಡಿ ಭಾಗಗಳ ಅಂಗಡಿಗೆ ಚಿಂತಾಮಣಿಯ ವಾಣಿಜ್ಯ ತೆರಿಗೆ ಅಧಿಕಾರಿ ಶ್ರೀ ಕೆ.ದೊರೈ ಮತ್ತು ಶ್ರೀ ನಾಗರಾಜ್, ಶ್ರೀ ಕೆ.ಪ್ರೇಮ್‌ರಾಜ್, ಶ್ರೀ ಜಯರಾಂ, ಸಹಾಯಕ, ಇವರುಗಳು ಅಂಗಡಿಗೆ ಬಂದು ಒಂದು ಲೀಟರ್ ಆಯಿಲ್ ಖರೀದಿಸಿದ ನಗದು ರಸೀದಿಯನ್ನು ಕೇಳಿದ್ದು, ಆಗ ಫಿರ್ಯಾದಿ ರಸೀದಿ ನೀಡದೇ ಇದ್ದುದರಿಂದ ಸ್ಥಳ ದಂಡವಾಗಿ ರೂ.2000/– ಗಳ ರಸೀದಿಯನ್ನು ಕೊಟ್ಟು ಅಂಗಡಿಯಲ್ಲಿನ ವಾರ್ಷಿಕ ಲೆಕ್ಕ ಪುಸ್ತಕಗಳನ್ನು, ದಿನವಹಿ ಬಿಡಿ ಚೀಟಿಗಳನ್ನು ಬಿಡದೆ ಜಪ್ತಿ ಮಾಡಿ ತೆಗೆದುಕೊಂಡು ಹೋಗಿದ್ದು, ಮರುದಿನ ಆಫೀಸಿಗೆ ಬರಲು ತಿಳಿಸಿರುತ್ತಾರೆ. ಅದರಂತೆ ಮಾರನೆ ದಿನ ಆರೋಪಿತರ ಕಛೇರಿಗೆ ಹೋದಾಗ ಆರೋಪಿಯಾದ ಶ್ರೀ ದೊರೈ ರವರು ಫಿರ್ಯಾದಿಯ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಿ ಅನುಕೂಲ ಮಾಡಿಕೊಡಲು ರೂ.1,00,000/– ಕೊಡಲು ಒತ್ತಾಯ ಮಾಡಿರುತ್ತಾರೆ. ಫಿರ್ಯಾದಿ ಅಷ್ಟು ಹಣ ಇಲ್ಲವೆಂದು ಬೇಡಿಕೊಂಡಾಗ ನಿನ್ನ ಮೇಲೆ ಕೇಸು ಹಾಕಿ ಕೋರ್ಟಿಗೆ ಹಾಕುತ್ತೇನೆ. ನಿನಗೆ ಆರು ತಿಂಗಳ ಸಜೆ ಮತ್ತು ದಂಡವಾಗುತ್ತದೆಂದು ಭಯಪಡಿಸಿರುತ್ತಾರೆ. ನಂತರ ಫಿರ್ಯಾದಿ ಚೌಕಾಸಿ ಮಾಡಿದಾಗ ಆರೋಪಿತರು ರೂ.25,000/–ಗಳನ್ನು ತೆಗೆದುಕೊಳ್ಳಲು ಒಪ್ಪಿರುತ್ತಾರೆ. ಈ ಸಂಬಂಧ ಫಿರ್ಯಾದುದಾರರಿಗೆ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ್ದರಿಂದ ಸೂಕ್ತ ಕಾನೂನು ಕ್ರಮಕ್ಕೆ ಕೋರಿರುತ್ತಾರೆ. ಸದರಿ ದೂರನ್ನು ಆಧರಿಸಿ ಚಿಕ್ಕಬಳ್ಳಾಪುರ ಲೋಕಾಯುಕ್ತ ಪೊಲೀಸ್‌ರವರು ಲಂಚ ನಿರೋಧಕ ಕಾಯಿದೆ, 1988ರ ಕಲಂ 13(1)(ಡಿ) ಜೊತೆಗೆ 13(2)ರ ಪ್ರಕಾರ ಚಿಕ್ಕಬಳ್ಳಾಪುರ ಲೋಕಾಯುಕ್ತ ಠಾಣೆ, ಮೊಕದ್ದಮೆ ಸಂಖ್ಯೆ:07/2008ರಲ್ಲಿ ಪ್ರಕರಣವನ್ನು ದಾಖಲೆ ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

9. ಆಪಾದಿತರ ಸಮಜಾಯಿಷಿ ಹೇಳಿಕೆಗಳು:
   1. ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿ.
   2. ಶ್ರೀ ಎನ್.ರಾಜಣ್ಣ, ವಾಣಿಜ್ಯ ತೆರಿಗೆ ಪರಿವೀಕ್ಷಕ, ಉಪ ಮೌಲ್ಯವರ್ಧಿತ ತೆರಿಗೆ ಕಛೇರಿ, ಚಿಂತಾಮಣಿ ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ.

ತನಿಖಾಧಿಕಾರಿಗಳಾದ ಶ್ರೀ ಎಂ.ಸಿ.ಬೂದಿಹಾಳ್, ಪೊಲೀಸ್ ಉಪ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ ಜಿಲ್ಲೆ, ಇವರು ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿ ರವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಚಿಕ್ಕಬಳ್ಳಾಪುರ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ:07/2008ರಲ್ಲಿ ಲಂಚ ನಿರೋಧಕ ಕಾಯಿದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿ, ಫಿರ್ಯಾದುದಾರರಾದ ಶ್ರೀ ಎಸ್. ರಾಘವೇಂದ್ರ, ಇಂಡಿಯನ್ ಮದ್ರಾಸ್ ಮೋಟಾರ್ಸ್, ಅಂಗಡಿಯ ಮಾಲೀಕರು, ಚೇಳೂರು ರಸ್ತೆ, ಚಿಂತಾಮಣಿ, ಇವರ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಿ ಅನುಕೂಲ ಮಾಡಿಕೊಡಲು ರೂ.25,000/– ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚದ ಹಣವನ್ನು ಕೊಡಲು ಬಯಸದ ಕಾರಣ ಸದರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವಂತೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಭಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:16.06.2008ರಂದು ಚಿಕ್ಕಬಳ್ಳಾಪುರ ಉಪಮೌಲ್ಯವರ್ಧಿತ ತೆರಿಗೆ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಕೆ.ದೊರೈ, ವಾಣೀಜ್ಯ ತೆರಿಗೆ ಅಧಿಕಾರಿ, ಇವರು ಅಕ್ರಮ ಸಂಭಾವನೆಯಾದ ರೂ.25,000/– ಗಳನ್ನು ತಾವು ತೆಗೆದುಕೊಳ್ಳದೆ ಶ್ರೀ ಎನ್.ರಾಜಣ್ಣ, ವಾಣೀಜ್ಯ ತೆರಿಗೆ ಪರಿವೀಕ್ಷಕರವರಿಗೆ ಕೊಡಲು ತಿಳಿಸಿದ್ದು, ಸದರಿಯವರು ರೂ.25,000/– ಗಳನ್ನು ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾಧಿತ ನೌಕರರಾದ ಶ್ರೀ ಎನ್.ರಾಜಣ್ಣ, ವಾಣಿಜ್ಯ ತೆರಿಗೆ ಪರಿವೀಕ್ಷಕ ಇವರ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಸಾರ್ವಜನಿಕ ಅಧಿಕಾರಿ/ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.25,000/– ಗಳನ್ನು ಶ್ರೀ ಎನ್.ರಾಜಣ್ಣ, ವಾಣಿಜ್ಯ ತೆರಿಗೆ ಪರಿವೀಕ್ಷಕ ಉಪ ಮೌಲ್ಯವರ್ಧಿತ ತೆರಿಗೆ ಕಛೇರಿ, ಚಿಂತಾಮಣಿ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆರವರಿಂದ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಪ್ರಕರಣದಲ್ಲಿ ಮೇಲೆ ವಿವರಿಸಿರುವಂತೆ ಆರೋಪಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿ ಮತ್ತು ಶ್ರೀ ಎನ್.ರಾಜಣ್ಣ, ವಾಣಿಜ್ಯ ತೆರಿಗೆ ಪರಿವೀಕ್ಷಕ, ಉಪ ಮೌಲ್ಯ ವರ್ಧತ ತೆರಿಗೆ ಕಛೇರಿ ಚಿಂತಾಮಣಿ ತಾಲ್ಲೂಕು, ಚಿಕ್ಕಬಳ್ಳಾಪುರ ಇವರಗಳ ಮೇಲಿನ ಭ್ರಷ್ಟಾಚಾರ ಆರೋಪ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಲಂಚ ನಿರೋಧಕ ಕಾಯಿದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಮನವರಿಕೆಯಾಗಿರುತ್ತದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯಿದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರಿವಾದ ಪ್ರಾಧಿಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರ ಉಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯಿದೆ, 1988ರ ಕಲಂ 19(ಸಿ) ಅಡಿಯಲ್ಲಿ ಆಪಾಧಿತ ಅಧಿಕಾರಿಯಾದ ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿರವರನ್ನು ಲಂಚ ನಿರೋಧಕ ಕಾಯಿದೆ, 1988ರ ಕಲಂ 7 ಮತ್ತು 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 47 ವಾತೆತ 2008, ಬೆಂಗಳೂರು, ದಿನಾಂಕ: 30ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯಿದೆ, 1988ರ ಕಲಂ 19(1)(ಬಿ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಕೆ.ದೊರೈ, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಲಂಚ ನಿರೋಧಕ ಕಾಯಿದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅಧಿಕಾರ ನೀಡಲಾಗಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ:30.05.2009ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1549 **ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ(ವಾ.ತೆ.–2)

**COMMERCE AND INDUSTRIES SECRETARIAT**

**Sub**: The Project Proposal of M/s Jupiter Aviation & Logistics Pvt. Ltd., Bangalore to establish a Unit for "Maintenance & Support Infrastructure for Commercial Aircrafts [MRO]" for – approval for order – reg.

**Read:** 1. Proceedings of the 8th State High Level Clearance Committee [SHLCC] meeting held on 23.2.2007.

2. Proceedings of the 13th Land Audit Committee Meeting held on 18.3.2009.

**Preamble:**

The Project Proposal of M/s Jupiter Aviation & Logistics Pvt. Ltd., Bangalore to establish a Unit for "Maintenance & Support Infrastructure for Commercial Aircrafts [MRO]" in 75 acres of land, out of the land being acquired by KIADB for the proposed Aerospace components manufacturing cluster adjoining the International Airport, Devanahalli, Bangalore Rural District, with an investment of Rs.1800.00 crores. Generating employment for 9000 people has been approved in-the 8th SHLCC meeting held on 23.2.2007.

After detailed discussion of the project proposal of the said Company, vide the proceedings in references 1 & 2 above, has recommended for approval of the project.

Government has examined the recommendations made by the State High Level Clearance Committee in the 8th Meeting held on 23.2.2007 and Proceedings of the 13th Land Audit Committee Meeting on 18.3.2009, in all aspects Hence the following order.

**Government Order No: CI 280 SPI 2007, Bangalore, Dated: 26th May 2009**

In the circumstances explained above, Government is pleased to accord the approval of the project proposal of M/s Jupiter Aviation & Logistics Pvt. Ltd., Bangalore to establish a Unit for "Maintenance & Support Infrastructure for Commercial Aircrafts [MRO]" adjoining the International Airport, Devanahalli, Bangalore Rural District, with an investment of Rs.1800.00 crores, Generating employment for 9000 people has been approved in the 8th SHLCC Meeting held on 23.2.2007 and Land Audit Committee Meeting held on 18.3.2009.

**INFRASTRUCTURE FACILITIES:**

**Land:** 75 acres of land to be allotted by KIADB, out of the land being acquired by KIADB for the proposed Aerospace components manufacturing cluster adjoining the International Airport, Devanahalli, Bangalore rural district.

**Incentives and Concessions:** As per Industrial Policy 2006-2011.

**Environment:** The promoters to obtain CFE and CFO from KSPCB and environmental clearance from MOEF, GOI. No works shall commence prior to obtaining EC as per prevailing law.

**Employment:** The Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**Vendor Development:** Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

**Others:** The promoter shall take all statutory and other necessary clearances including GOI and shall submit milestones/progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the Governor of Karnataka,

P.R. 1357

**APARNA PAVATE**

Desk Officer (Technical Cell), Commerce & Industries Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ರಾಜ್ಯದ ಸರ್ಕಾರಿ ಹಾಗೂ ಖಾಸಗಿ ಫಾರ್ಮಸಿ, ಕಾಲೇಜುಗಳಲ್ಲಿನ ಎಂ.ಫಾರ್ಮ ಸೀಟುಗಳಿಗೆ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ:ಆಕುಕ 163 ಪಿಟಿಡಿ 2008, ದಿನಾಂಕ:24–05–2008.

(2) ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ:ಪಿಜಿಎಸ್/74/2008–09, ದಿನಾಂಕ:11–05–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರಲ್ಲಿನ ಸರ್ಕಾರದ ಆದೇಶದಲ್ಲಿ, 2008–09ನೇ ಸಾಲಿಗೆ ರಾಜ್ಯದ ಸರ್ಕಾರಿ ಹಾಗೂ ಖಾಸಗಿ ಫಾರ್ಮಸಿ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸುಗಳಿಗೆ ಸಂಬಂಧಪಟ್ಟಂತೆ ಪ್ರವೇಶದ ಮಿತಿ ಮತ್ತು ಸೀಟುಗಳ ಹಂಚಿಕೆಯನ್ನು ಹಿಂದಿನ ಸಾಲಿನಲ್ಲಿ ಅಳವಡಿಸಿಕೊಂಡಿದ್ದ ಪ್ರಕ್ರಿಯೆಯನ್ನು ಯಥಾಸ್ಥಿತಿ ಮುಂದುವರೆಸಿ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸಲಾಗಿದೆ.

ಮೇಲೆ ಓದಲಾದ ಕ.ಸಂ.(2)ರಲ್ಲಿನ ಪತ್ರದಲ್ಲಿ, ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು ಇವರು 2009–10ನೇ ಸಾಲಿನಲ್ಲಿ ಸ್ನಾತಕೋತ್ತರ ಕೋರ್ಸುಗಳಿಗೆ ಸರ್ಕಾರಿ ಹಾಗೂ ಖಾಸಗಿ ಕಾಲೇಜುಗಳಿಗೆ ಎಂ.ಫಾರ್ಮ ಸೀಟುಗಳನ್ನು ಶೇಕಡಾ 50:50ರ ಅನುಪಾತದಲ್ಲಿ ನಿಗದಿಪಡಿಸಿ, ಸೀಟುಗಳ ಆಧಾರದ ಮೇಲೆ ಸೀಟ್ ಮ್ಯಾಟ್ರಿಕ್ಸ್ ಆದೇಶವನ್ನು ಪ್ರಕಟಿಸುವಂತೆ ಕೋರಿರುತ್ತಾರೆ.

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ ಇವರು ಮೇಲೆ ಓದಲಾದ ಕ್ರ.ಸಂ.(2)ರಲ್ಲಿನ ಪತ್ರದಲ್ಲಿ ಸ್ಪಷ್ಟಪಡಿಸಿರುವಂತೆ, 2009–10ನೇ ಸಾಲಿಗಾಗಿ ಸರ್ಕಾರಿ/ಖಾಸಗಿ ಕಾಲೇಜುಗಳಲ್ಲಿನ ಎಂ.ಫಾರ್ಮ ಕೋರ್ಸುಗಳಿಗೆ ಸೀಟುಗಳನ್ನು ಹಂಚಿಕೆ ಮಾಡಿ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 161 ಪಿಟಿಡಿ 2009, ಬೆಂಗಳೂರು, ದಿನಾಂಕ: 19ನೇ ಮೇ 2009**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ 2009–10ನೇ ಸಾಲಿನಲ್ಲಿ ರಾಜ್ಯದ ಸರ್ಕಾರಿ ಮತ್ತು ಖಾಸಗಿ ಫಾರ್ಮಸಿ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸುಗಳ ಪ್ರವೇಶಕ್ಕೆ ಸಂಬಂಧಪಟ್ಟಂತೆ ಸೀಟುಗಳ ಹಂಚಿಕೆಯನ್ನು ಈ ಕೆಳಗಿನಂತೆ ನಿಗದಿಪಡಿಸಿ ಆದೇಶಿಸಲಾಗಿದೆ.

**ಸ್ನಾತಕೋತ್ತರ ಕೋರ್ಸುಗಳು**

| ಕ್ರಮ ಸಂಖ್ಯೆ | ಕೋರ್ಸಿನ ಹೆಸರು | ಸರ್ಕಾರಿ ಕೋಟಾ ಸೀಟುಗಳು | ಆಡಳಿತ ಮಂಡಳಿ ಸೀಟುಗಳು |
|---|---|---|---|
| 01 | ಎಂ.ಫಾರ್ಮ | 50% | 50% |

ರಾಜ್ಯದ ಸರ್ಕಾರಿ ಹಾಗೂ ಸರ್ಕಾರಿ/ಖಾಸಗಿ ಕಾಲೇಜುಗಳಿಗೆ ಸೀಟುಗಳನ್ನು ಹಂಚಿಕೆ ಮಾಡಿದ ವಿವರವನ್ನು ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ANNEXURE-I

### STATEMENT SHOWING THE M.PHARM SEATS IN GOVERNMENT & PRIVATE PHARMACY COLLEGES FOR THE ACADEMIC YEAR 2009-10

| Sl. No. | Subject | Govt. College of Pharmacy, Bangalore | Al-Ameen College of Pharmacy, Bangalore | | | Bapuji Pharmacy College, Davangere | | | TMAE Society's SCS College of Pharmacy, Davangere | | | National College of Pharmacy Shimoga | | |
|---|---|---|---|---|---|---|---|---|---|---|---|---|---|---|
| | | TS | TS | MS | GS | TS | MS | GS | TS | MS | GS | TS | MS | GS |
| 1 | Pharmaceutics | 6 | 7 | 3 | 4 | - | - | - | - | - | - | 10 | 5 | 5 |
| 2 | Pharma Chemistry | 6 | 10 | 5 | 5 | - | - | - | 8 | 4 | 4 | - | - | - |
| 3 | Pharmacology | 4 | 7 | 4 | 3 | - | - | - | 11 | 6 | 5 | - | - | - |
| 4 | Pharmacognosy | 4 | 7 | 4 | 3 | - | - | - | - | - | - | 10 | 5 | 5 |
| 5 | Pharma Marketing & Management | - | 10 | 5 | 5 | - | - | - | - | - | - | - | - | - |
| 6 | Quality Assurance | - | 5 | 2 | 3 | - | - | - | - | - | - | - | - | - |
| 7 | Pharmacy Practice | - | 6 | 3 | 3 | - | - | - | - | - | - | - | - | - |
| 8 | Industrial Pharmacy | - | - | - | - | 14 | 7 | 7 | - | - | - | - | - | - |
| 9 | Bulk Drucks | - | - | - | - | - | - | - | - | - | - | - | - | - |
| 10 | Pharma Technology | - | - | - | - | - | - | - | - | - | - | - | - | - |
| 11 | Pharmaceutical Analysis | - | - | - | - | - | - | - | - | - | - | 10 | 5 | 5 |
| 12 | Pharma Bio- Technology | - | - | - | - | - | - | - | - | - | - | - | - | - |
| | **TOTAL** | **20** | **52** | **26** | **26** | **14** | **7** | **7** | **19** | **10** | **09** | **30** | **15** | **15** |

| Sl. No. | Subject | Bharathi College of Pharmacy, Mandya | | | Karnataka College of Pharmacy, Bidar | | | BVVS Hanagal Shri Kumareshwar Colleg of Pharmacy, Bagalkot | | | V.V.Puram College of Pharmacy, Bangalore | | |
|---|---|---|---|---|---|---|---|---|---|---|---|---|---|
| | | TS | MS | GS | TS | MS | GS | TS | MS | GS | TS | MS | GS |
| 1 | Pharmaceutics | 10 | 5 | 5 | - | - | - | - | - | - | 10 | 5 | 5 |
| 2 | Pharma Chemistry | 10 | 5 | 5 | - | - | - | - | - | - | | | |
| 3 | Pharmacology | - | - | - | - | - | - | 8 | 4 | 4 | 10 | 5 | 5 |
| 4 | Pharmacognosy | - | - | - | - | - | - | - | - | - | - | - | - |

| Sl. No. | Subject | Bharathi College of Pharmacy, Mandya | | | Karnataka College of Pharmacy, Bidar | | | BVVS Hanagal Shri Kumareshwar Colleg of Pharmacy, Bagalkot | | | V.V.Puram College of Pharmacy, Bangalore | | |
|---|---|---|---|---|---|---|---|---|---|---|---|---|---|
| | | TS | MS | GS | TS | MS | GS | TS | MS | GS | TS | MS | GS |
| 5 | Pharma Marketing & Management | - | - | - | - | - | - | - | - | - | - | - | - |
| 6 | Quality Assurance | - | - | - | - | - | - | - | - | - | - | - | - |
| 7 | Pharmacy Practice | - | - | - | - | - | - | - | - | - | 10 | 5 | 5 |
| 8 | Industrial Pharmacy | - | - | - | 6 | 3 | 3 | - | - | - | - | - | - |
| 9 | Bulk Drucks | - | - | - | 5 | 3 | 2 | - | - | - | - | - | - |
| 10 | Pharma Technology | - | - | - | - | - | - | - | - | - | - | - | - |
| 11 | Pharmaceutical Analysis | 10 | 5 | 5 | - | - | - | - | - | - | - | - | - |
| 12 | Pharma Bio- Technology | 10 | 5 | 5 | - | - | - | - | - | - | - | - | - |
| | **TOTAL** | **40** | **20** | **20** | **11** | **6** | **5** | **8** | **4** | **4** | **30** | **15** | **15** |

| Sl. No. | Subject | Soniya Education Trust's College of Pharmacy, Dharwad | | | Dayananda Sagar College of Pharmacy Bangalore | | | HKES. College of Pharmacy, Gulbarga | | | BLDEA College of Pharmacy, Bijapur | | |
|---|---|---|---|---|---|---|---|---|---|---|---|---|---|
| | | TS | MS | GS | TS | TS | MS | GS | TS | TS | MS | GS | TS |
| 1 | Pharmaceutics | - | - | - | 10 | 5 | 5 | - | - | - | 10 | 5 | 5 |
| 2 | Pharma Chemistry | - | - | - | 10 | 5 | 5 | - | - | - | 10 | 5 | 5 |
| 3 | Pharmacology | 10 | 5 | 5 | 10 | 5 | 5 | 10 | 5 | 5 | - | - | - |
| 4 | Pharmacognosy | - | - | - | - | - | - | 5 | 2 | 3 | - | - | - |
| 5 | Pharma Marketing & Management | - | - | - | - | - | - | - | - | - | - | - | - |
| 6 | Quality Assurance | - | - | - | - | - | - | - | - | - | - | - | - |
| 7 | Pharmacy Practice | - | - | - | - | - | - | - | - | - | - | - | - |
| 8 | Industrial Pharmacy | - | - | - | - | - | - | - | - | - | - | - | - |
| 9 | Bulk Drucks | - | - | - | - | - | - | - | - | - | - | - | - |
| 10 | Pharma Technology | - | - | - | - | - | - | 10 | 5 | 5 | - | - | - |
| 11 | Pharmaceutical Analysis | - | - | - | - | - | - | 10 | 5 | 5 | - | - | - |
| 12 | Pharma Bio- Technology | - | - | - | - | - | - | - | - | - | - | - | - |
| | **TOTAL** | **10** | **5** | **5** | **30** | **15** | **15** | **35** | **17** | **18** | **20** | **10** | **10** |

| Sl. No. | Subject | V.L. College of Pharmacy, Raichur | | | Nargund College of Pharmacy, Bangalore | | | Sree Siddaganga College of Pharmacy, Tumkur | | | St.John's Pharmacy College, Bangalore | | |
|---|---|---|---|---|---|---|---|---|---|---|---|---|---|
| | | TS | MS | GS | TS | MS | GS | TS | MS | GS | TS | MS | GS |
| 1 | Pharmaceutics | 6 | 3 | 3 | 10 | 5 | 5 | 10 | 4 | 6 | - | - | - |
| 2 | Pharma Chemistry | 11 | 6 | 5 | 10 | 5 | 5 | - | - | - | - | - | - |
| 3 | Pharmacology | 6 | 3 | 3 | 10 | 5 | 5 | 12 | 4 | 8 | 10 | 5 | 5 |
| 4 | Pharmacognosy | - | - | - | - | - | - | - | - | - | - | - | - |
| 5 | Pharma Marketing & Management | - | - | - | - | - | - | - | - | - | - | - | - |
| 6 | Quality Assurance | - | - | - | - | - | - | - | - | - | - | - | - |
| 7 | Pharmacy Practice | - | - | - | - | - | - | - | - | - | - | - | - |
| 8 | Industrial Pharmacy | - | - | - | - | - | - | - | - | - | - | - | - |
| 9 | Bulk Drucks | - | - | - | - | - | - | - | - | - | - | - | - |
| 10 | Pharma Technology | - | - | - | - | - | - | - | - | - | - | - | - |
| 11 | Pharmaceutical Analysis | - | - | - | - | - | - | - | - | - | - | - | - |
| 12 | Pharma Bio- Technology | - | - | - | - | - | - | - | - | - | - | - | - |
| | **TOTAL** | **23** | **12** | **11** | **30** | **15** | **15** | **22** | **8** | **14** | **10** | **5** | **5** |

| Sl. No. | Subject | Krupanidhi College of Pharmacy, Bangalore | | | Acharya B.M. Reddy College of Pharmacy, Bangalore | | | PES College of Pharmacy, Bangalore | | |
|---|---|---|---|---|---|---|---|---|---|---|
| | | TS | MS | GS | TS | MS | GS | TS | MS | GS |
| 1 | Pharmaceutics | 8 | 4 | 4 | 8 | 4 | 4 | 10 | 5 | 5 |
| 2 | Pharma Chemistry | 10 | 5 | 5 | 12 | 6 | 6 | 10 | 5 | 5 |
| 3 | Pharmacology | 10 | 5 | 5 | 12 | 6 | 6 | 10 | 5 | 5 |
| 4 | Pharmacognosy | - | - | - | - | - | - | 8 | 4 | 4 |
| 5 | Pharma Marketing & Management | - | - | - | - | - | - | - | - | - |
| 6 | Quality Assurance | - | - | - | - | - | - | - | - | - |
| 7 | Pharmacy Practice | - | - | - | - | - | - | - | - | - |
| 8 | Industrial Pharmacy | - | - | - | 12 | 6 | 6 | - | - | - |

| Sl. No. | Subject | Krupanidhi College of Pharmacy, Bangalore | | | Acharya B.M. Reddy College of Pharmacy, Bangalore | | | PES College of Pharmacy, Bangalore | | |
|---|---|---|---|---|---|---|---|---|---|---|
| | | TS | MS | GS | TS | MS | GS | TS | MS | GS |
| 9 | Bulk Drucks | - | - | - | - | - | - | - | - | - |
| 10 | Pharma Technology | - | - | - | - | - | - | - | - | - |
| 11 | Pharmaceutical Analysis | - | - | - | - | - | - | 8 | 4 | 4 |
| 12 | Pharma Bio- Technology | - | - | - | - | - | - | - | - | - |
| | **TOTAL** | **28** | **14** | **14** | **44** | **22** | **22** | **46** | **23** | **23** |

| Sl. No. | Subject | M S Ramaiah College of Pharmacy, Bangalore | | | Oxford College of Pharmacy, Bangalore | | | Sri Adichunchangiri College of Pharmacy, Mandya | | |
|---|---|---|---|---|---|---|---|---|---|---|
| | | TS | MS | GS | TS | MS | GS | TS | MS | GS |
| 1 | Pharmaceutics | - | - | - | - | - | - | - | - | - |
| 2 | Pharma Chemistry | 10 | 5 | 5 | - | - | - | 10 | 5 | 5 |
| 3 | Pharmacology | - | - | - | - | - | - | - | - | - |
| 4 | Pharmacognosy | 10 | 5 | 5 | 10 | 5 | 5 | - | - | - |
| 5 | Pharma Marketing & Management | - | - | - | - | - | - | - | - | - |
| 6 | Quality Assurance | - | - | - | - | - | - | - | - | - |
| 7 | Pharmacy Practice | - | - | - | - | - | - | - | - | - |
| 8 | Industrial Pharmacy | - | - | - | - | - | - | - | - | - |
| 9 | Bulk Drucks | - | - | - | - | - | - | - | - | - |
| 10 | Pharma Technology | - | - | - | - | - | - | - | - | - |
| 11 | Pharmaceutical Analysis | - | - | - | - | - | - | - | - | - |
| 12 | Pharma Bio- Technology | - | - | - | - | - | - | - | - | - |
| | **TOTAL** | **20** | **10** | **10** | **10** | **5** | **5** | **10** | **5** | **5** |

| Sl. No. | Subject | RRK Samithi's College of Pharmacy, Bidar | | | Dr.H.L. Thimmegowda College of Pharmacy, Channapatna | | | NET College of Pharmacy, Raichur | | | SJM College of Pharmacy, Chitradurga | | |
|---|---|---|---|---|---|---|---|---|---|---|---|---|---|
| | | TS | MS | GS | TS | MS | GS | TS | MS | GS | TS | MS | GS |
| 1 | Pharmaceutics | 8 | 4 | 4 | 8 | 4 | 4 | 10 | 8 | 2 | - | - | - |
| 2 | Pharma Chemistry | - | - | - | 6 | 3 | 3 | - | - | - | 8 | 4 | 4 |
| 3 | Pharmacology | - | - | - | - | - | - | 10 | 8 | 2 | - | - | - |
| 4 | Pharmacognosy | - | - | - | - | - | - | - | - | - | - | - | - |
| 5 | Pharma Marketing & Management | - | - | - | - | - | - | - | - | - | - | - | - |
| 6 | Quality Assurance | - | - | - | - | - | - | - | - | - | - | - | - |
| 7 | Pharmacy Practice | - | - | - | - | - | - | - | - | - | - | - | - |
| 8 | Industrial Pharmacy | - | - | - | - | - | - | - | - | - | - | - | - |
| 9 | Bulk Drucks | - | - | - | - | - | - | - | - | - | - | - | - |
| 10 | Pharma Technology | - | - | - | - | - | - | - | - | - | - | - | - |
| 11 | Pharmaceutical Analysis | - | - | - | - | - | - | - | - | - | - | - | - |
| 12 | Pharma Bio- Technology | - | - | - | - | - | - | - | - | - | - | - | - |
| | **TOTAL** | **8** | **4** | **4** | **14** | **7** | **7** | **20** | **16** | **4** | **8** | **4** | **4** |

**N. MAHALAKSHMAMMA**
Under Secretary to Government,
Health and Family Welfare Department

P.R. 1358

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** 2008–09 ನೇ ಸಾಲಿನ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ ಪಾಲಿನ ಬಾಕಿ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–20015: 28 : 2007–ಡಿಆರ್‌ಡಿಎ (ಎಸ್‌ಆರ್ ನಂ.10) ದಿನಾಂಕ 03–04–08, (ಎಸ್‌ಆರ್ ನಂ.40) ದಿನಾಂಕ 28–05–08. ಆರ್–17014/10/ 2008–09 ಡಿಆರ್‌ಡಿಎ (ಎಸ್‌ಎಲ್ 82) ದಿನಾಂಕ 03–11–08 ಮತ್ತು (ಎಸ್ ನಂ.90) ದಿನಾಂಕ 14–11–2008, (ಎಸ್‌ಎಲ್ ನಂ.108) ದಿನಾಂಕ 11–12–08, (ಎಸ್‌ಎಲ್ ನಂ.141) ದಿನಾಂಕ 09–01–09 (ಎಸ್‌ಎಲ್ ನಂ.159) ದಿನಾಂಕ 23–01–09. ಮತ್ತು (ಎಸ್ ನಂ.186) ದಿನಾಂಕ 19–02–09.
2. ಸರ್ಕಾರದ ಆದೇಶ ಸಂ. ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008 ಬೆಂಗಳೂರು, ದಿನಾಂಕ 23–05–08, 26–06–08, ದಿನಾಂಕ 18–12–08, 31–01–09, 19–02–09 ಮತ್ತು 06–03–09
3. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2008 (ಪಿ) ಬೆಂಗಳೂರು, ದಿನಾಂಕ 07–03–09, ತಿದ್ದುಪಡಿ 09–03–09, 21–03–09 ಮತ್ತು 23–03–09.
4. ಕೇಂದ್ರ ಸರ್ಕಾರದ ಪತ್ರ ಆರ್ 17014/35/2008/ಡಿಆರ್‌ಡಿಎ (ಎಸ್‌ಎಲ್ ನಂ.232) ದಿನಾಂಕ 31–03–2009

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯಡಿ, ಓದಲಾಗಿದೆ (4) ರನ್ವಯ ಕೇಂದ್ರ ಸರ್ಕಾರ 2008–09ನೇ ಸಾಲಿಗೆ ರಾಜ್ಯದ ಬಾಗಲಕೋಟೆ, ಬೆಂಗಳೂರು ನಗರ, ಬೆಳಗಾಂ, ಬಳ್ಳಾರಿ, ಬೀದರ್, ಬಿಜಾಪುರ, ಚಾಮರಾಜನಗರ, ಚಿಕ್ಕಮಗಳೂರು, ಚಿತ್ರದುರ್ಗ, ದಕ್ಷಿಣ ಕನ್ನಡ, ದಾವಣಗೆರೆ, ಧಾರವಾಡ, ಗದಗ್, ಗುಲ್ಬರ್ಗಾ, ಹಾಸನ, ಹಾವೇರಿ, ಕೊಡಗು, ಕೊಪ್ಪಳ, ಮಂಡ್ಯ, ಮೈಸೂರು, ಶಿವಮೊಗ್ಗ, ತುಮಕೂರು, ಉಡುಪಿ ಮತ್ತು ಉತ್ತರ ಕನ್ನಡ ಒಟ್ಟು 24 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಬಾಕಿ ಅನುದಾನ ರೂ.1,22,19,000 ಗಳನ್ನು ದಿನಾಂಕ 31–03–2009 ರಂದು ಬಿಡುಗಡೆ ಮಾಡಿದ ಕಾರಣ ರಾಜ್ಯದ ಪಾಲಿನ ಅನುದಾನವನ್ನು ಸದರಿ ಸಾಲಿನಲ್ಲಿ ಬಿಡುಗಡೆ ಮಾಡಲು ಸಾಧ್ಯವಾಗಲಿಲ್ಲ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನವನ್ನು 2009–10 ನೇ ಸಾಲಿನ ಆಯವ್ಯಯದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿದೆ.

2008–09 ನೇ ಸಾಲಿಗೆ ಕೇಂದ್ರ ಸರ್ಕಾರ ಒಟ್ಟು ರೂ.11,59,22,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ, ರಾಜ್ಯವು ರೂ.3,86,41,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ, 2007–08 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ಅನುದಾನ ಬಿಡುಗಡೆ ವರ್ಷಾಂತ್ಯದಲ್ಲಿ ಮಾಡಿದ್ದು, ಬೆಂಗಳೂರು ಗ್ರಾಮಾಂತರ, ಬಿಜಾಪುರ ಮತ್ತು ಗುಲ್ಬರ್ಗಾ ಜಿಲ್ಲೆಗಳು ರೂ.15,14,000 ಲಕ್ಷಗಳನ್ನು ಸದರಿ ಸಾಲಿನಲ್ಲಿ ಸೆಳೆಯದ ಕಾರಣ 2008–09 ನೇ ಸಾಲಿನಲ್ಲಿ ನವೀಕರಿಸಿ ಬಿಡುಗಡೆ ಗೊಳಿಸಲಾಯಿತು. ಅಲ್ಲದೆ, 2008–09 ನೇ ಸಾಲಿನಲ್ಲಿ ರಾಜ್ಯದ ಕೆಲವು ಜಿಲ್ಲಾ ಪಂಚಾಯತಿಗಳಲ್ಲಿ ವೇತನ ವಿತರಿಸಲು ಅನುದಾನದ ಕೊರತೆಯಿದ್ದ ಕಾರಣ, ಡಿಆರ್‌ಡಿಎ ಆಡಳಿತ ಮಾರ್ಗಸೂಚಿಯನ್ವಯ ರಾಜ್ಯದ ಪಾಲಿನ ಅನುದಾನದಿಂದ ಭರಿಸಿ ಬಿಡುಗಡೆಗೊಳಿಸಲಾಗಿದೆ. ಆದ ಕಾರಣ, 2008–09 ನೇ ಸಾಲಿನಲ್ಲಿ ರಾಜ್ಯ ಸರ್ಕಾರ ಈ ಯೋಜನೆಗೆ ಒಟ್ಟು ಅನುದಾನ ರೂ.4,85,70,000 ಗಳನ್ನು ಬಿಡುಗಡೆ ಮಾಡಲಾಯಿತು.

2008–09 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಮೇಲಿನ 24 ಜಿಲ್ಲಾ ಪಂಚಾಯತಿಗಳಿಗೆ ರೂ.10,50,24,000 ಗಳನ್ನು ಬಿಡುಗಡೆ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ರೂ.3,50,08,000 ಗಳನ್ನು ಬಿಡುಗಡೆ ಮಾಡಬೇಕಿದ್ದು, ಇದರ ಬದಲಿಗೆ ರೂ.4,20,51,000 ಗಳನ್ನು ಬಿಡುಗಡೆ ಮಾಡಿದೆ. ಈಗಾಗಲೇ ಬಿಡುಗಡೆ ಮಾಡಿದ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ, ಉಳಿದ 14 ಜಿಲ್ಲಾ ಪಂಚಾಯತಿಗಳಾದ ಬಾಗಲಕೋಟೆ, ಬೆಂಗಳೂರು ನಗರ, ಬೆಳಗಾಂ, ಬೀದರ್, ಚಾಮರಾಜನಗರ, ಚಿಕ್ಕಮಗಳೂರು, ಚಿತ್ರದುರ್ಗ, ಧಾರವಾಡ, ಗದಗ್, ಹಾಸನ, ಹಾವೇರಿ, ಕೊಡಗು, ಉಡುಪಿ ಮತ್ತು ಉತ್ತರ ಕನ್ನಡ ಗಳಿಗೆ ರೂ.24,13,000 ಗಳನ್ನು 2009–10ನೇ ಸಾಲಿನ ಆಯವ್ಯಯದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿರುವುದಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ: 20ನೇ ಮೇ 2009**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2008–09ನೇ ಸಾಲಿನಲ್ಲಿ ನೇ ಸಾಲಿನ ಬಾಕಿ ಅನುದಾನವನ್ನು 2009–2010ನೇ ಸಾಲಿನ ಆಯವ್ಯಯದಿಂದ ಭರಿಸಿ ಅನುಬಂಧದಲ್ಲಿ ತೋರಿಸಿರುವಂತೆ ಜಿಲ್ಲಾ

ಪಂಚಾಯತಿಗಳಿಗೆ ಒಟ್ಟು ರೂ.24,13,000 ಗಳನ್ನು (ರೂ.ಇಪ್ಪತ್ತನಾಲ್ಕು ಲಕ್ಷದ ಹದಿಮೂರು ಸಾವಿರ ಮಾತ್ರ) ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿ ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸ ತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2009–2010 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವ ಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ :ಗ್ರಾಅಪ 151 ಪಿಬಿಎಸ್ 2009 ದಿನಾಂಕ 19–05–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ: 20–05–2009 ಕ್ಕೆ ಅನುಬಂಧ**

(ರೂ.ಗಳಲ್ಲಿ)

| ಕ್ರ ಸಂ | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2008–09 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ ಒಟ್ಟು ಅನುದಾನ | ಇದಕ್ಕನು ಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾಗಿದ್ದ ಒಟ್ಟು ಅನುದಾನ | ರಾಜ್ಯ ಸರ್ಕಾರ ಈಗಾಗಲೇ ಬಿಡುಗಡೆ ಮಾಡಿದ ಒಟ್ಟು ಅನುದಾನ | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಉಳಿಕೆ ಅನುದಾನ |
|---|---|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 55,73,000 | 18,58,000 | 16,46,000 | 2,12,000 |
| 2 | ಬೆಂಗಳೂರು ನಗರ | 401 | 0100ZZ8001 | 48,13,000 | 16,04,000 | 14,21,000 | 1,83,000 |
| 3 | ಬೆಳಗಾಂ | 413 | 2200ZZ0002 | 54,42,000 | 18,14,000 | 16,08,000 | 2,06,000 |
| 4 | ಬಳ್ಳಾರಿ | 418 | 3400ZZ0001 | 59,11,000 | 19,70,000 | 28,79,000 | 0 |
| 5 | ಬೀದರ್ | 419 | 3800ZZ5701 | 39,66,000 | 12,22,000 | 11,71,000 | 1,51,000 |
| 6 | ಬಿಜಾಪುರ | 414 | 2800ZZ9152 | 45,91,000 | 15,30,000 | 26,68,000 | 0 |
| 7 | ಚಾಮರಾಜನಗರ | 456 | 1000ZZ0001 | 27,85,000 | 9,28,000 | 8,22,000 | 1,06,000 |

| ಕ್ರ ಸಂ | ಜಿಲ್ಲಾ ಪಂಚಾಯತಿ ಹೆಸರು | [illegible] | ಡಿ.ಡಿ.ಓ ಕೋಡ್ | 2008–09 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ ಒಟ್ಟು ಅನುದಾನ | ಇದಕ್ಕನು ಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾಗಿದ್ದ ಒಟ್ಟು ಅನುದಾನ | ರಾಜ್ಯ ಸರ್ಕಾರ ಈಗಾಗಲೇ ಬಿಡುಗಡೆ ಮಾಡಿದ ಒಟ್ಟು ಅನುದಾನ | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಉಳಿಕೆ ಅನುದಾನ |
|---|---|---|---|---|---|---|---|
| 8 | ಚಿಕ್ಕಮಗಳೂರು | 408 | 1800ZZ0017 | 25,53,000 | 8,51,000 | 6,79,000 | 1,72,000 |
| 9 | ಚಿತ್ರದುರ್ಗ | 403 | 1600ZZ0001 | 58,78,000 | 19,59,000 | 17,36,000 | 2,23,000 |
| 10 | ದಕ್ಷಿಣ ಕನ್ನಡ | 409 | 1900ZZ0047 | 37,47,000 | 12,49,000 | 14,19,000 | 0 |
| 11 | ದಾವಣಗೆರೆ | 451 | 1700ZZ0002 | 47,05,000 | 15,68,000 | 21,53,000 | 0 |
| 12 | ಧಾರವಾಡ | 415 | 2500ZZ8798 | 51,11,000 | 17,04,000 | 15,09,000 | 1,95,000 |
| 13 | ಗದಗ್ | 462 | 2600ZZ0001 | 46,67,000 | 15,56,000 | 13,78,000 | 1,78,000 |
| 14 | ಗುಲ್ಬರ್ಗಾ | 417 | 3200ZZ0003 | 34,93,000 | 11,64,000 | 34,32,000 | 0 |
| 15 | ಹಾಸನ | 410 | 1300ZZ0003 | 46,28,000 | 15,43,000 | 13,67,000 | 1,76,000 |
| 16 | ಹಾವೇರಿ | 463 | 2700ZZ0001 | 35,49,000 | 11,83,000 | 10,48,000 | 1,35,000 |
| 17 | ಕೊಡಗು | 411 | 1200ZZ0001 | 20,88,000 | 6,96,000 | 5,48,000 | 1,48,000 |
| 18 | ಕೊಪ್ಪಳ | 466 | 1500ZZ0010 | 20,67,000 | 6,89,000 | 10,91,000 | 0 |
| 19 | ಮಂಡ್ಯ | 412 | 1100ZZ0001 | 52,49,000 | 17,50,000 | 26,51,000 | 0 |
| 20 | ಮೈಸೂರು | 407 | 0900ZZ0001 | 53,69,000 | 17,90,000 | 32,69,000 | 0 |
| 21 | ಶಿವಮೊಗ್ಗ | 405 | 1400ZZ0002 | 53,07,000 | 17,69,000 | 19,68,000 | 0 |
| 22 | ತುಮಕೂರು | 406 | 0800ZZ0001 | 51,72,000 | 17,24,000 | 30,30,000 | 0 |
| 23 | ಉಡುಪಿ | 457 | 2000ZZ0001 | 41,26,000 | 13,75,000 | 12,18,000 | 1,57,000 |
| 24 | ಉತ್ತರ ಕನ್ನಡ | 416 | 3000ZZ0080 | 45,34,000 | 15,11,000 | 13,40,000 | 1,71,000 |
| | ಒಟ್ಟು: | | | **10,50,24,000** | **3,50,08,000** | **4,20,51,000** | **24,13,000** |

**ಡಾ:ಶಮ್ಲಾ ಇಕ್ಬಾಲ್**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1392

**ವಿಷಯ:** 2009–10ನೇ ಸಾಲಿಗೆ ಎಸ್‌ಜಿಎಸ್‌ವೈ ಒಂದನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/1/2009 ಎಸ್‌ಜಿಎಸ್‌ವೈ–I (10) ದಿನಾಂಕ : 16–04–2008.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಭಾಗಶ: ಅನುದಾನ ರೂ.32,88,40,000 ಗಳನ್ನು ರಾಜ್ಯದ ಎಲ್ಲಾ 29 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಮೊದಲನೇ ಕಂತಿನ ಅನುದಾನ ರೂ.10,96,13,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು, ದಿನಾಂಕ: 20ನೇ ಮೇ 2009**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಮೊದಲನೇ ಕಂತಿನ ಅನುದಾನ ರೂ.10,96,13,000 ಗಳನ್ನು (ರೂ.ಹತ್ತು ಕೋಟಿ ತೊಂಬತ್ತಾರು ಲಕ್ಷದ ಹದಿಮೂರು ಸಾವಿರ ಮಾತ್ರ) ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಷರತ್ತುಗಳು :

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2009–2010ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್ ಜೆ ವೈ 2007 ದಿನಾಂಕ 18–04–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2009–10 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 148 ಪಿಬಿಎಸ್ 2009 ದಿನಾಂಕ: 19–05–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು, ದಿನಾಂಕ : 20 –05–2009**

(ರೂ.ಗಳಲ್ಲಿ)

| ಕ್ರ ಸಂ | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಭಾಗಶ: ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾದ ಮೊದಲನೇ ಕಂತಿನ ಅನುದಾನ |
|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 77,62,000 | 25,87,000 |
| 2 | ಬೆಂಗಳೂರು (ಗ್ರಾ) | 402 | 0300ZZ8001 | 42,83,000 | 14,28,000 |
| 3 | ಬೆಂಗಳೂರು ನಗರ | 401 | 0100ZZ8001 | 33,04,000 | 11,01,000 |
| 4 | ಬೆಳಗಾಂ | 413 | 2200ZZ0002 | 2,29,39,000 | 76,46,000 |
| 5 | ಬಳ್ಳಾರಿ | 418 | 3400ZZ0001 | 1,82,28,000 | 60,76,000 |
| 6 | ಬೀದರ್ | 419 | 3800ZZ5701 | 1,29,18,000 | 43,06,000 |
| 7 | ಬಿಜಾಪುರ | 414 | 2800ZZ9152 | 1,52,08,000 | 50,69,000 |
| 8 | ಚಾಮರಾಜನಗರ | 456 | 1000ZZ0001 | 1,60,97,000 | 53,66,000 |
| 9 | ಚಿಕ್ಕಮಗಳೂರು | 408 | 1800ZZ0017 | 73,08,000 | 24,36,000 |
| 10 | ಚಿಕ್ಕಬಳ್ಳಾಪುರ | 453 | 0600ZZ0001 | 84,54,000 | 28,18,000 |

| ಕ್ರ ಸಂ | ಜಿಲ್ಲಾ ಪಂಚಾಯತಿ ಹೆಸರು | ಜಿಲ್ಲಾ ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಭಾಗಶ: ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾದ ಮೊದಲನೇ ಕಂತಿನ ಅನುದಾನ |
|---|---|---|---|---|---|
| 11 | ಚಿತ್ರದುರ್ಗ | 403 | 1600ZZ0001 | 1,29,84,000 | 43,28,000 |
| 12 | ದಕ್ಷಿಣ ಕನ್ನಡ | 409 | 1900ZZ0047 | 70,57,000 | 23,52,000 |
| 13 | ದಾವಣಗೆರೆ | 451 | 1700ZZ0002 | 1,04,80,000 | 34,93,000 |
| 14 | ಧಾರವಾಡ | 415 | 2500ZZ8798 | 65,38,000 | 21,79,000 |
| 15 | ಗದಗ್ | 462 | 2600ZZ0001 | 1,03,76,000 | 34,59,000 |
| 16 | ಗುಲ್ಬರ್ಗಾ | 417 | 3200ZZ0003 | 1,88,97,000 | 62,99,000 |
| 17 | ಹಾಸನ | 410 | 1300ZZ0003 | 94,73,000 | 31,58,000 |
| 18 | ಹಾವೇರಿ | 463 | 2700ZZ0001 | 1,13,32,000 | 37,77,000 |
| 19 | ಕೊಡಗು | 411 | 1200ZZ0001 | 26,63,000 | 8,88,000 |
| 20 | ಕೋಲಾರ | 404 | 0700ZZ8002 | 95,52,000 | 31,84,000 |
| 21 | ಕೊಪ್ಪಳ | 466 | 1500ZZ0010 | 1,63,03,000 | 54,34,000 |
| 22 | ಮಂಡ್ಯ | 412 | 1100ZZ0001 | 1,23,31,000 | 41,10,000 |
| 23 | ಮೈಸೂರು | 407 | 0900ZZ0001 | 1,50,29,000 | 50,10,000 |
| 24 | ರಾಯಚೂರು | 420 | 3600ZZ0001 | 1,53,53,000 | 51,18,000 |
| 25 | ರಾಮನಗರ | 452 | 0400ZZ0001 | 76,68,000 | 25,56,000 |
| 26 | ಶಿವಮೊಗ್ಗ | 405 | 1400ZZ0002 | 1,30,60,000 | 43,53,000 |
| 27 | ತುಮಕೂರು | 406 | 0800ZZ0001 | 1,93,56,000 | 64,52,000 |
| 28 | ಉಡುಪಿ | 457 | 2000ZZ0001 | 57,46,000 | 19,15,000 |
| 29 | ಉತ್ತರ ಕನ್ನಡ | 416 | 3000ZZ0080 | 81,41,000 | 27,14,000 |
| | **ಒಟ್ಟು:** | | | **32,88,40,000** | **10,96,13,000** |

**ಡಾ:ಶಮ್ಲಾ ಇಕ್ಬಾಲ್**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1393

**ವಿಷಯ:** 2009–10 ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನವನ್ನು ರಾಜ್ಯದ 26 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್– 18014 : 03 : 2009–10–ಡಿಆರ್‌ಡಿಎ (ಎಸ್‌ಆರ್ ನಂ.10) ದಿನಾಂಕ 13–04–2009

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರು ಡಿಆರ್‌ಡಿಎ ಆಡಳಿತ ಯೋಜನೆಗೆ ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಭಾಗಶ: ಅನುದಾನ ರೂ.3,98,75,000 ಗಳನ್ನು ಚಿಕ್ಕಬಳ್ಳಾಪುರ, ರಾಮನಗರ ಮತ್ತು ರಾಯಚೂರು ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 26 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಮೊದಲನೇ ಕಂತಿನ ಅನುದಾನ ರೂ.1,32,92,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜಿವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ: 20ನೇ ಮೇ 2009**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಗೆ ಮೊದಲನೇ ಕಂತಿನ ಅನುದಾನ ರೂ.1,32,92,000 ಗಳನ್ನು (ರೂ.ಒಂದು ಕೋಟಿ ಮೂವತ್ತೆರಡು ಲಕ್ಷದ ತೊಂಬತ್ತೆರಡು ಸಾವಿರ ಮಾತ್ರ) ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವ 26 ಜಿಲ್ಲಾ ಪಂಚಾಯತಿಗಳಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಪಂಚಾಯತಿಗಳ ಅನುದಾನವನ್ನು ಜಿಲ್ಲಾ ಪಂಚಾಯತಿಗಳ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2009–2010 (2515–00–196–6–06) " ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5 ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 150 ಪಿಬಿಎಸ್.2009 ದಿನಾಂಕ: 19–05–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ. ನಿ.

ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜಿವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ:20–05–2009ಕ್ಕೆ**

**ಅನುಬಂಧ**

(ರೂ.ಗಳಲ್ಲಿ)

| ಕ್ರ ಸಂ | ಜಿಲ್ಲಾ ಪಂಚಾಯತಿ | ಲಿಂಕ್ ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಭಾಗಶ: ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 16,74,000 | 5,58,000 |
| 2 | ಬೆಂಗಳೂರು (ಗ್ರಾ) | 402 | 0300ZZ8001 | 13,51,000 | 4,50,000 |
| 3 | ಬೆಂಗಳೂರು ನಗರ | 401 | 0100ZZ8001 | 13,51,000 | 4,50,000 |
| 4 | ಬೆಳಗಾವಿ | 413 | 2200ZZ0002 | 16,74,000 | 5,58,000 |
| 5 | ಬಳ್ಳಾರಿ | 418 | 3400ZZ0001 | 16,74,000 | 5,58,000 |
| 6 | ಬೀದರ್ | 419 | 3800ZZ5701 | 13,51,000 | 4,50,000 |
| 7 | ಬಿಜಾಪುರ | 414 | 2800ZZ9152 | 13,51,000 | 4,50,000 |

| ಕ್ರ ಸಂ | ಜಿಲ್ಲಾ ಪಂಚಾಯತಿ | [illegible] | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಭಾಗಶ: ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|---|
| 8 | ಚಾಮರಾಜನಗರ | 456 | 1000ZZ0001 | 13,51,000 | 4,50,000 |
| 9 | ಚಿಕ್ಕಮಗಳೂರು | 408 | 1800ZZ0017 | 16,74,000 | 5,58,000 |
| 10 | ಚಿತ್ರದುರ್ಗ | 403 | 1600ZZ0001 | 16,74,000 | 5,58,000 |
| 11 | ದಕ್ಷಿಣ ಕನ್ನಡ | 409 | 1900ZZ0047 | 13,51,000 | 4,50,000 |
| 12 | ದಾವಣಗೆರೆ | 451 | 1700ZZ0002 | 16,74,000 | 5,58,000 |
| 13 | ಧಾರವಾಡ | 415 | 2500ZZ8798 | 13,51,000 | 4,50,000 |
| 14 | ಗದಗ್ | 462 | 2600ZZ0001 | 13,51,000 | 4,50,000 |
| 15 | ಗುಲ್ಬರ್ಗಾ | 417 | 3200ZZ0003 | 16,73000 | 5,58,000 |
| 16 | ಹಾಸನ | 410 | 1300ZZ0003 | 16,73,000 | 5,58,000 |
| 17 | ಹಾವೇರಿ | 463 | 2700ZZ0001 | 16,73,000 | 5,58,000 |
| 18 | ಕೊಡಗು | 411 | 1200ZZ0001 | 13,51,000 | 4,50,000 |
| 19 | ಕೋಲಾರ | 404 | 0700ZZ8002 | 13,51,000 | 4,50,000 |
| 20 | ಕೊಪ್ಪಳ | 466 | 1500ZZ0010 | 13,51,000 | 4,50,000 |
| 21 | ಮಂಡ್ಯ | 412 | 1100ZZ0001 | 16,73,000 | 5,58,000 |
| 22 | ಮೈಸೂರು | 407 | 0900ZZ0001 | 16,73,000 | 5,58,000 |
| 23 | ಶಿವಮೊಗ್ಗ | 405 | 1400ZZ0002 | 16,73,000 | 5,58,000 |
| 24 | ತುಮಕೂರು | 406 | 0800ZZ0001 | 16,73,000 | 5,58,000 |
| 25 | ಉಡುಪಿ | 457 | 2000ZZ0001 | 13,51,000 | 4,50,000 |
| 26 | ಉತ್ತರ ಕನ್ನಡ | 416 | 3000ZZ0080 | 19,08,000 | 6,36,000 |
| | ಒಟ್ಟು: | | | **3,98,75,000** | **1,32,92,000** |

**ಡಾ: ಶಮ್ಲಾ ಇಕ್ಬಾಲ್**
ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ. ನಿ.
ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1394

## COMMERCE AND INDUSTRIES SECRETARIAT

**Sub:** Approval of proposal of M/s. Jai Prakash Engineering & Steel Company Limited., to establish "Free Trade and Warehousing SEZ" in Baikampady, Kenjar, Kulai, Thokur Villages, Mangalore District.

**Ref:**
1. Proceedings of the 10th State High Level Clearance Committee (SHLCC) meeting held on 28.08.2007.
2. Proceedings of the 14th State High Level Clearance Committee (SHLCC) meeting held on 17.3.2008.
3. Proceedings of the meeting held on 05.05.2008 under the Chairmanship of the Principle Secretary to Govt Commerce & Industries Department.

**Preamble:**

M/s. Jai Prakash Engineering & Steel Company Limited., proposes to establish "Free Trade and Warehousing SEZ" in125 acres of land out 783.27 acres of land already allotted by KIADB, in Baikampady, Kenjar, Kulai, Thokur Villages, Mangalore District, with an investment of Rs.96.00 crores.

The project Proposes to provide employment to about 8,000 persons. The Company has requested for approval of the project and sanction of various infrastructure facilities as well as incentives and concessions.

The State High Level Clearance Committee (SHLCC), after detailed discussion approved the proposal of M/s. Jai Prakash Engineering & Steel Company Limited., in its 10th meeting held on 28.08.2007, and decided to grant infrastructure facilities and to extend incentives and concessions, the proposal was again reviewed by the SHLCC in its 14th meeting held on 17.03.2008, and it was decided that the issue may be resolved in consultation with KIADB and to take a decision on file.

In this connection, separate meeting was held under the Chairmanship of Principle Secretary to Government, C & I Department on 05.04.2008 and it is was decided to recommend the proposal. Hence the following order.

**Government Order No: CI 33 SPI 2008, Bangalore Dated:28th May 2009**

In the circumstances explained above, Government is pleased to approve the project proposal of M/s. Jai Prakash Engineering & Steel Company Limited., to establish "Free Trade and Warehousing SEZ" in 125 acres of land out 783.27 acres of land already allotted by KIADB, in various sy.nos in Baikampady, Kenjar, Kulai, Thokur Villages, Mangalore District, as in the annexure, with an investment of Rs.96.00 crores., and extend the following infrastructure facilities, incentives and concessions.

**INFRASTRUCTURE FACILITIES:**

**Land:** The Company to establish the facility in125 acres of land out 783.27 acres of land already allotted by KIADB, at various Sy.Nos as in annexure, of Baikampady, Kenjar, Kulai, Thokur Villages, Mangalore District. The Company shall provide 200 acres of land to District Administration for constructing Offices and stadium, at free of cost and 80.91 acres to Mangalore SEZ as agreed upon.

**Power:** 3 MW to be serviced from MESCOM.

**Water:** 1 MLD of water to be supplied by local Authorities subject to availability and from the Company's own bore wells. The company shall adopt rainwater harvesting and water recycling.

**Incentives and Concessions:** As per SEZ Policy of Government of India.

**Environment:** KSPCB to issue CFE as per norms. The company shall obtain CRZ and MOEF Clearances from MOEF, Government of India. No civil works shall commence prior to obtaining ECC.

**Employment:** Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e. Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**Vendor Development:** Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of the proposed location of the unit. A copy of such projects shall be sent to the Government.

**Others:**

1. The promoters shall take all statutory and other necessary clearances and plan approval from competent authorities and shall submit milestones/ progress in implementation of the project regularly, which will be monitored by the Departments concerned.

2. The project proponents shall implement rehabilitation and resettlement plan as per the National Rehabilitation and Resettlement Policy –2007, whenever applicable.
3. Wherever acquisition through Karnataka Industrial Area Development Board, (KIADB) is proposed, the project proponents shall provide employment for at least one member of the family of each land loser.
4. In projects which envisage a housing component, the promoters shall reserve 20% of residential built-up area of the project for economically weaker sections (LIG)
5. The project proponents shall provide a map indicating the road connectivity and a note on the anticipated circulation pattern, traffic management, etc. Karnataka Udyoga Mitra, (KUM) shall share this with the PWD and the Home Department. The project proponents shall agree to part with land free of cost for any road widening/traffic mitigation measures that may be suggested by Public Works Department (PWD)/Home Department.
6. In all cases where significant employment is to be created under the proposed project, Karnataka Udyoga Mitra, (KUM) shall forward the manpower needs to the Departments of Employment & Training and C & I and ensure that skill development programmes are taken up in the catchments area of the project.

This approval is valid for a period of two years from the date of issue.

By Order and in the name of the Governor of Karnataka,

**APARNA PAVATE**

Desk Officer (Technical Cell) Commerce & Industries Department

**Details of Survery numbers of land proposed for Free Trade Warehousing SEZ Project [FTW SEZ] at Kenjar Village in Mangalore Taluk, Dakshina Kannada District**

| Sl. No. | Survey No. | Extent of land [acres] |
|---|---|---|
| 1 | 58[part] | 4.36 |
| 2 | 69 | 7.28 |
| 3 | 70 | 8.50 |
| 4 | 71 | 5.32 |
| 5 | 72 | 10.35 |
| 6 | 73 | 6.36 |
| 7 | 74 | 7.75 |
| 8 | 78 | 3.70 |
| 9 | 79 | 2.72 |
| 10 | 80 | 3.90 |
| 11 | 81 | 2.64 |
| 12 | 82 | 5.14 |
| 13 | 83 | 8.39 |
| 14 | 89 | 0.09 |
| 15 | 102 | 21.02 |
| 16 | 103 | 3.28 |
| 17 | 104 | 7.92 |
| 18 | 105 | 16.28 |
| | **Total** | **125.00** |

**APARNA PAVATE**

P.R. 1433

Desk Officer (Technical Cell) Commerce & Industries Department

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಶ್ರೀ ಕುಮಾರ್, ಚಾಲಕ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವಾಹನ ಚಾಲಕರಾಗಿ ಗುತ್ತಿಗೆ ಆಧಾರದ ಮೇಲೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪತ್ರ ಸಂಖ್ಯೆ: ಕಅಪ್ರಾ/ಕಾ/34/08–09 ದಿನಾಂಕ:22.12.2008.

**ಪ್ರಸ್ತಾವನೆ:**

ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ ಓದಲಾದ ದಿನಾಂಕ 22.12.2008ರ ಪತ್ರದಲ್ಲಿ ಶ್ರೀ ಕುಮಾರ್, ವಾಹನ ಚಾಲಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಬೆಂಗಳೂರು (ಗ್ರಾಮಾಂತರ) ಇವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿಗಳ ಕಛೇರಿಯಲ್ಲಿ ವಾಹನ ಚಾಲಕರ ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದು, ಅವರ ನಿಯೋಜನಾ ಅವಧಿಯು ದಿನಾಂಕ 17.01.2009ಕ್ಕೆ ಮುಕ್ತಾಯಗೊಳ್ಳುವುದರಿಂದ ಹಾಗೂ ಅವರ ಸೇವೆ ಪ್ರಾಧಿಕಾರಕ್ಕೆ ಅವಶ್ಯಕವಾರುವುದರಿಂದ ನಿಯೋಜನಾ ಅವಧಿಯನು ಮುಂದುವರೆಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 3 ಕೆಒಎಲ್ 2009, ಬೆಂಗಳೂರು, ದಿನಾಂಕ: 23ನೇ ಮೇ 2009**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಅವರ ಕಛೇರಿಯಲ್ಲಿ ವಾಹನ ಚಾಲಕರ ಹುದ್ದೆಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಕುಮಾರ್, ಚಾಲಕರು, (ಬಿಲ್ಲೆ ಸಂಖ್ಯೆ: 1505) ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಹಾರೋಹಳ್ಳಿ ಘಟಕ, ಬೆಂಗಳೂರು (ಗ್ರಾಮಾಂತರ) ಇವರ ನಿಯೋಜನಾ ಅವಧಿಯನ್ನು ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 25 ಕೆಓಎಲ್ 2007 ದಿನಾಂಕ 24.12.2007 ರಲ್ಲಿ ನಿಗಧಿಪಡಿಸಿರುವ ಷರತ್ತು ಮತ್ತು ನಿಬಂಧನೆಗೆ ಒಳಪಟ್ಟಂತೆ ದಿನಾಂಕ 18.01.2009 ರಿಂದ 17.01.2010 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 215 ವೆಚ್ಚ–7/2009 ದಿನಾಂಕ:03.04.2009ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1447 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 58 ಬೆಮಪ್ರಾ 2009, ಬೆಂಗಳೂರು, ದಿನಾಂಕ: 29ನೇ ಜೂನ್ 2009**

ಸರ್ಕಾರದ ಆದೇಶ ಸಂಖ್ಯೆ:ನಅಇ 196 ಬೆಮಪ್ರಾ 2008 ದಿನಾಂಕ:15.12.2008ರನ್ವಯ ಘೋಷಿಸಲಾದ **"ವಿಜಯನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ"** ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 3(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **"ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರವನ್ನು"** ರಚಿಸಿದೆ.

| ಕ್ರ. ಸಂ. | ಸದಸ್ಯರುಗಳು | ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ | ಷರಾ |
|---|---|---|---|
| 1 | ಅಧ್ಯಕ್ಷರು | ಕಲಂ 3(3)(a) | ಜಿಲ್ಲಾಧಿಕಾರಿಗಳು ಬಳ್ಳಾರಿ ಜಿಲ್ಲೆ (ಸರ್ಕಾರದಿಂದ ಅಧಿಕಾರೇತರರನ್ನು ನಾಮನಿರ್ದೇಶನ ಮಾಡುವವರಿವಿಗೆ) |
| 2 | ನಗರ ಯೋಜಕ ಸದಸ್ಯರು | ಕಲಂ 3(3)(b) | ನಗರ ಯೋಜನಾ ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆಯಿಂದ ನಿಯೋಜನೆ ಮೇರೆಗೆ |
| 3 | ಅಭಿಯಂತರ ಸದಸ್ಯರು | ಕಲಂ 3(3)(c) | ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ ಜಿಲ್ಲೆ |
| 4 | ವಿಧಾನಸಭಾ ಸದಸ್ಯರು | ಕಲಂ 3(3)(d) | ಪೂರ್ಣ ಅಥವಾ ಭಾಗಶ: ಪ್ರದೇಶವನ್ನು ಪ್ರತಿನಿಧಿಸುತ್ತಿರುವ ಸದಸ್ಯರು |

| ಕ್ರ. ಸಂ. | ಸದಸ್ಯರುಗಳು | ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ | ಷರಾ |
|---|---|---|---|
| 5 | ವಿಧಾನ ಪರಿಷತ್ ಸದಸ್ಯರು | –– | ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಶಾಶ್ವತವಾಗಿ ವಾಸವಾಗಿರುವ ಸದಸ್ಯರು |
| 6 | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಪ್ರತಿನಿಧಿ | ಕಲಂ 3(3)(e) | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಪ್ರತಿನಿಧಿ, ಬಳ್ಳಾರಿ ಜಿಲ್ಲೆ. |
| 7 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯ ಪ್ರತಿನಿಧಿ | ಕಲಂ 3(3)(f) | ಜೆಸ್ಕಾಂನ ಪ್ರತಿನಿಧಿ, ಬಳ್ಳಾರಿ ಜಿಲ್ಲೆ |
| 8 | ಮುಖ್ಯಾಧಿಕಾರಿಗಳು–ಪುರಸಭೆ ಸಂಡೂರು | ಕಲಂ 3(3)(g) | –– |
| 9 | ಜಿಲ್ಲಾಧಿಕಾರಿಗಳು–ಬಳ್ಳಾರಿ ಜಿಲ್ಲೆ | ಕಲಂ 3(3)(h) | –– |
| 10 | ಸ್ಥಳೀಯ ಸಂಸ್ಥೆಯಾದ ಪುರಸಭೆ ಪ್ರತಿನಿಧಿ, ಸಂಡೂರು | ಕಲಂ 3(3)(i) | ಚುನಾಯಿತ ಸದಸ್ಯರಲ್ಲಿ ಒಬ್ಬರನ್ನು ಸರ್ಕಾರವು ನೇಮಿಸಬೇಕಾಗಿದೆ |
| 11 | ಆರಕ್ಷಕ ಅಧೀಕ್ಷಕರು (ಎಸ್.ಪಿ), ಬಳ್ಳಾರಿ ಜಿಲ್ಲೆ | ಕಲಂ 3(3)(j) | –– |
| 12 | ಜಿಲ್ಲಾ ಆರೋಗ್ಯಾಧಿಕಾರಿಗಳು, ಬಳ್ಳಾರಿ ಜಿಲ್ಲೆ | ಕಲಂ 3(3)(k) | –– |
| 13 | ಆರ್ಕಿಟೆಕ್ಚರ್ನಲ್ಲಿ ಅನುಭವ ಹೊಂದಿರುವ ವ್ಯಕ್ತಿ | ಕಲಂ 3(3)(l) | ಸರ್ಕಾರದಿಂದ ನೇಮಿಸಬೇಕಾಗಿದೆ |
| 14 | ನಾಲ್ಕ ಜನ (ಒಬ್ಬರು ಮಹಿಳೆ ಮತ್ತು ಒಬ್ಬರು ಪರಿಶಿಷ್ಠ ಪಂಗಡಕ್ಕೆ ಸೇರಿದಂತಹವರು) ಇತರೆ ಸದಸ್ಯರು | ಕಲಂ 3(3)(m) | ಸರ್ಕಾರದಿಂದ ನೇಮಿಸಲ್ಪಡುವ ಅಧಿಕಾರೇತರ ಸದಸ್ಯರು |
| 15 | ಆಯುಕ್ತರು ಪದನಿಮಿತ್ತ | ಕಲಂ 3(3)(n) | ಗುಂಪು ಎ ಅಧಿಕಾರಿಯನ್ನು ಸರ್ಕಾರದಿಂದ ನಿಯೋಜಿಸಬೇಕಾಗಿದೆ. |

ವಿಜಯನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಒಳಪಟ್ಟ ಹೊಸಪೇಟೆ ಮತ್ತು ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರಗಳ ವ್ಯಾಪ್ತಿಯಲ್ಲಿದ್ದಂತಹ 43 ಗ್ರಾಮಗಳ ಯೋಜನಾ ವಿಷಯಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ವಿಜಯನಗರ ಅಭಿವೃದ್ಧಿ ಪ್ರಾಧಿಕಾರವು ರಚನೆಯಾಗುವವರೆವಿಗೆ, ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4 (ಎ)(4) ಹಾಗೂ ಕಲಂ 76 ಕೆ (1) ರಡಿಯಲ್ಲಿ ಪ್ರದತ್ತವಾದ ಆಧಿಕಾರವನ್ನು ಚಲಾಯಿಸಿ ಈ ಹಿಂದೆ ಆಯಾ ನಗರಾಭಿವೃದ್ಧಿ ಪ್ರಾಧಿಕಾರಗಳೇ ನಿರ್ವಹಿಸಲು ಸೂಚಿಸಿದ ಅಧಿಸೂಚನೆ ಸಂಖ್ಯೆ:ನಅಇ 72 ಗುಅಪ್ರಾ 2009 ದಿನಾಂಕ:24.04.2009ನ್ನು ಈ ಮೂಲಕ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1449

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸುವ ಬಗ್ಗೆ

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 196 ಬೆಮಪ್ರಾ 2008, ದಿನಾಂಕ: 15.12.2008.
2) ನಿರ್ದೇಶಕರು, ನಗರ ಯೋಜನಾ ಇಲಾಖೆ ರವರ ಏಕ ಕಡತ ಸಂಖ್ಯೆ:ನಯೋನಿ/ ವಿಜಯನಗರ–ಪ್ರಾಧಿಕಾರ/216/2008,
3) ಸರ್ಕಾರದ ಆಧಿಸೂಚನೆ ಸಂಖ್ಯೆ:ನಅಇ 58 ಬೆಮಪ್ರಾ 2009,.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಾಂಕ (1) ರ ಆದೇಶದಲ್ಲಿ ಬಳ್ಳಾರಿ–ಸಂಡೂರು ಸ್ಥಳೀಯ ಯೋಜನಾ ಪ್ರದೇಶದಿಂದ ಸದರಿ ಆದೇಶಕ್ಕೆ ಲಗತ್ತಿಸಿರುವ ಅನುಬಂಧ–3 ರಲ್ಲಿ ತೋರಿಸಲಾದ 31 ಮತ್ತು ಹೊಸಪೇಟೆ ಸ್ಥಳೀಯ ಯೋಜನಾ ಪ್ರದೇಶದಿಂದ ಅನುಬಂಧ–4 ರಲ್ಲಿ ತೋರಿಸಲಾದ 8 ಗ್ರಾಮಗಳನ್ನು ಕೈಬಿಟ್ಟು, ವಿಜಯನಗರ ಸ್ಥಳೀಯ ಯೋಜನಾ ಪ್ರದೇಶವನ್ನು ಅನುಬಂಧ–1 ರಲ್ಲಿ ತೋರಿಸಿರುವ 43 ಗ್ರಾಮಗಳನ್ನೊಳಗೊಂಡಂತೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4 (ಎ) ರನ್ವಯ ಘೋಷಿಸಲಾಗಿತ್ತು.

ತದ ನಂತರ ಮೇಲೆ ಓದಲಾದ ಕ್ರಮಾಂಕ (2)ರ ಅನ್ವಯ ನಿರ್ದೇಶಕರು, ನಗರ ಯೋಜನಾ ಇಲಾಖೆ ರವರ ಪ್ರಸ್ತಾವನೆಯಂತೆ ಬಳ್ಳಾರಿ ಜಿಲ್ಲೆಯ ವಿಜಯನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 3(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಗಿದೆ. ಸದರಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರದ ಕಛೇರಿ ನಿರ್ವಹಣೆಯ ಉದ್ದೇಶಕ್ಕಾಗಿ ಅವಶ್ಯವಿರುವ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸುವ ಅವಸ್ಯಕತೆ ಇರುತ್ತದೆ.

ಅದರಂತೆ ಸರ್ಕಾರವು ಪರಿಸೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 58 ಬೆಮಪ್ರಾ 2009, ಬೆಂಗಳೂರು ದಿನಾಂಕ: 29ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸ್ಥೂಲವಾಗಿ ಪರಿಶೀಲಿಸಿದ ನಂತರ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಈ ಕೆಳಕಂಡಂತೆ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಆಯುಕ್ತರು (ಹಿರಿಯಶ್ರೇಣಿಯ ಕೆ.ಎ.ಎಸ್/ಕೆಎಂಎಎಸ್) | 1 |
| 2. | ಸಹಾಯಕ ಕಾರ್ಯಪಾಲಕ ಅಭಿಯಂತರರು | 1 |
| 3. | ಟೌನ್ ಪ್ಲ್ಯಾನರ್ ಮೆಂಬರ್<br>(ಸಹಾಯಕ ನಗರ ಯೋಜನಾ ನಿರ್ದೇಶಕರು) | 1 |
| 4. | ಕಂದಾಯ ನಿರೀಕ್ಷಕರು | 1 |
| 5. | ಸರ್ವೇಯರ್ | 1 |
| 6. | ಸಹಾಯಕ ಅಭಿಯಂತರರು | 1 |
| 7. | ಬೆರಳಚ್ಚುಗಾರರು/ಶೀಘ್ರಲಿಪಿಗಾರರು | 1 |
| 8. | ಪ್ರಥಮ ದರ್ಜೆ ಸಹಾಯಕರು | 1 |
| 9. | ದ್ವಿತಿಯ ದರ್ಜೆ ಸಹಾಯಕರು | 1 |
| 10. | ವಾಹನ ಚಾಲಕ | 2 |
| 11. | ಗ್ರೂಪ್ 'ಡಿ' ನೌಕರರು | 4 |

ಮೇಲ್ಕಂಡ ಕ್ರಮ ಸಂಖ್ಯೆ. 1 ರಿಂದ 6 ಮತ್ತು 8, 9 ರಲ್ಲಿನ ಹುದ್ದೆಗಳನ್ನು ನಿಯೋಜನೆ ಮೇರೆಗೆ ಮತ್ತು ಬೆರಳಚ್ಚುಗಾರರು/ಶೀಘ್ರಲಿಪಿಗಾರ, ವಾಹನ ಚಾಲಕ ಹಾಗೂ ಗ್ರೂಪ್ ' ಡಿ' ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ನೇಮಕಾತಿ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಈಆ 300 Exp 9 2009 ದಿನಾಂಕ 17.06.2009 ರನ್ವಯ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1450 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

### ತಿದ್ದುಪಡಿ ಆದೇಶ

**ಸಂಖ್ಯೆ:ಸಿಐ 232 ಎಸ್‌ಪಿಐ 2008, ಬೆಂಗಳೂರು, ದಿನಾಂಕ: 11ನೇ ಜೂನ್ 2009.**

**ವಿಷಯ:** ಕರ್ನಾಟಕ ರಾಜ್ಯದ ಉದ್ದಗಲಕ್ಕೂ ಕೈಗಾರಿಕಾಭಿವೃದ್ಧಿಗೆ ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಯೋಜನೆ ಮತ್ತು ಕೈಗಾರಿಕಾ ಕಾರಿಡಾರ್ ಯೋಜನೆಯನ್ನು ಜಾರಿಗೊಳಿಸಲು ಜಿಲ್ಲಾ ಮಟ್ಟದ ಕಾರ್ಯಪಡೆ ಸಮಿತಿ ರಚಿಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಿಐ 232 ಎಸ್‌ಪಿಐ 2008 ದಿ: 24.04.2009.

ಮೇಲೆ ಓದಲಾದ ಸರ್ಕಾರಿ ಆದೇಶದ, ಆದೇಶ ಭಾಗದ ಕಂಡಿಕೆ (3) ರಲ್ಲಿ "ಜಂಟಿ ನಿರ್ದೇಶಕರುಗಳಿಗೆ ಅನ್ವಯವಾಗುವ ಜಿಲ್ಲೆಗಳು" ಇದರಲ್ಲಿ ಶಿವಮೊಗ್ಗ ಜಿಲ್ಲೆಯನ್ನು ಸೇರಿಸಿಕೊಳ್ಳತಕ್ಕದ್ದು.

ಆದೇಶ ಭಾಗದ ಕಂಡಿಕೆ (4) ರಲ್ಲಿ "ಜಿಲ್ಲಾ ನಗರ ಯೋಜನಾ ಅಧಿಕಾರಿಗಳಿಗೆ ಅನ್ವಯವಾಗುವ ಜಿಲ್ಲೆಗಳು" ಇದರಲ್ಲಿ ಶಿವಮೊಗ್ಗ ಜಿಲ್ಲೆಯನ್ನು ಸೇರಿಸಿಕೊಳ್ಳತಕ್ಕದ್ದು.

ಆದೇಶ ಭಾಗದ ಕಂಡಿಕೆ (6) ರಲ್ಲಿ "ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ರವರುಗಳಿಗೆ ಅನ್ವಯವಾಗುವ ಜಿಲ್ಲೆಗಳು" ಇದರಲ್ಲಿ ಹಾಸನ ಜಿಲ್ಲೆಯನ್ನು ಸೇರಿಸಿಕೊಳ್ಳತಕ್ಕದ್ದು.

ಆದೇಶ ಭಾಗದ ಕಂಡಿಕೆ (7) ರಲ್ಲಿ "ಕೈಗಾರಿಕಾ ಸಂಘದ ಪ್ರತಿನಿಧಿಗಳಿಗೆ ಅನ್ವಯವಾಗುವ ಜಿಲ್ಲೆಗಳು" ಇದರಲ್ಲಿ ಶಿವಮೊಗ್ಗ ಜಿಲ್ಲೆಯನ್ನು ಸೇರಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1470

**ಅಪರ್ಣ ಪಾವಟೆ**

ಪೀಠಾಧಿಕಾರಿ (ತಾಂತ್ರಿಕ ಕೋಶ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಸ್ವೀಮರ) ಶಾಖೆಯ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2008 ದಿ:10.10.08.

2. ದಿ:24–2–2009ರ ಪತ್ರ ಸಂಖ್ಯೆ: ಕಸಂವಾಪ್ರ 21 ಸ್ವೀಮರ 2009

3. ದಿ:03–04–09ರ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್‌ರವರ ಪತ್ರ ಸಂಖ್ಯೆ:966/ಸಿಜಿಎಸ್/ವೈಎಡಿ/ಕ.ಸಂ./08–09.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯಲ್ಲಿರುವ ರೀಕೋ ಕಂಪನಿಯ ಜೆರಾಕ್ಸ್ ಯಂತ್ರದ ವಾರ್ಷಿಕ ಕಾರ್ಯನಿರ್ವಹಣಾ ಗುತ್ತಿಗೆಯನ್ನು ನೀಡುವ ಸಲುವಾಗಿ ದರ ಪಟ್ಟಿಯನ್ನು 03 ಕಂಪನಿಗಳಿಂದ ಕೋರಲಾಗಿತ್ತು.

ಕಾಪಿಯರ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆಗಾಗಿ ಈ ಕೆಳಕಂಡ ಕಂಪನಿಗಳು ದರಪಟ್ಟಿಯನ್ನು ನೀಡಿದ್ದವು. ಅದರ ವಿವರಗಳು ಈ ಕೆಳಗಿನಂತಿವೆ.

| ಕ್ರ. ಸಂ. | ಕಂಪನಿಯ ಹೆಸರು | ವಿವರ | ಒಟ್ಟು ರೂ.ಗಳಲ್ಲಿ |
|---|---|---|---|
| 1 | ಕಾಂಪು ಗ್ರಾಫೀಕ್ಸ್ ಸಿಸ್ಟಮ್ಸ್ | ಎ.ಎಂ.ಸಿ. | 9500/– |
| 2 | ತೀರ್ಥಂಕರ್ ಎಂಟರ್ ಪ್ರೈಸಸ್ | ಎ.ಎಂ.ಸಿ. | 10750/– |
| 3 | ಭಾರತಿ ಎಂಟರ್ ಪ್ರೈಸಸ್ | ಎ.ಎಂ.ಸಿ. | 9750/– |

ಈ ಮೇಲ್ಕಂಡ ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಬೆಂಗಳೂರಿನ ಕಾಂಪು ಗ್ರಾಫೀಕ್ಸ್ ಸಿಸ್ಟಮ್ಸ್, ನಂ.36/3, ಆಂಜನೇಯಸ್ವಾಮಿ ದೇವಸ್ಥಾನ ರಸ್ತೆ, ಮಾರಪ್ಪ ಗಾರ್ಡನ್ ಬೆನ್‌ಸನ್ ಟೌನ್ ಪೋಸ್ಟ್, ಬೆಂಗಳೂರು–46, ರವರಿಗೆ ರೂ.10478/– (ಹತ್ತು ಸಾವಿರದ ನಾಲ್ಕು ನೂರ ಎಪ್ಪತ್ತೆಂಟು ರೂ.ಗಳು ಮಾತ್ರ) (ಸರ್ವೀಸ್ ಟ್ಯಾಕ್ಸ್ 10.3% ಸೇರಿ) ವಾರ್ಷಿಕ ಗುತ್ತಿಗೆ ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 21 ಸ್ವೀಮರ 2009, ಬೆಂಗಳೂರು, ದಿನಾಂಕ: 27ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯಲ್ಲಿನ ರೀಕೋ ಕಂಪನಿಯ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆಯನ್ನು ನೀಡುವ ಸಲುವಾಗಿ 03 ಕಂಪನಿಗಳಿಂದ ದರ ಪಟ್ಟಿಯನ್ನು ಕರೆದಿದ್ದು ಅತಿ ಕಡಿಮೆ ದರ 9500–00 ರೂ.ಗಳನ್ನು ಸೂಚಿಸಿರುವ ಬೆಂಗಳೂರಿನ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಯ ದರ ರೂ.9500–00 ಮತ್ತು ಶೇಕಡ 10.3 ಸರ್ವೀಸ್ ಟ್ಯಾಕ್ಸ್ ಸೇರಿ ಒಟ್ಟು ರೂ. 10478–00 ((ಹತ್ತು ಸಾವಿರ ನಾಲ್ಕು ನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ವಾರ್ಷಿಕ ಗುತ್ತಿಗೆಯನ್ನು ನೀಡಲು ಆದೇಶ ನೀಡಿದೆ.

ಈ ವೆಚ್ಚವನ್ನು ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2008, ದಿನಾಂಕ:10–10–2008ರ ಆದೇಶದನ್ವಯ ಭರಿಸುವುದು. ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಗೆ ರೂ. 10478–00 ಮೊತ್ತವನ್ನು ಸಿಆಸುಇ ಲೆಕ್ಕಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ (ಸ್ವೀಮರ) ಶಾಖೆಯಲ್ಲಿರುವ ಜೆರಾಕ್ಸ್ ಯಂತ್ರದ ವಾರ್ಷಿಕ ಗುತ್ತಿಗೆಯನ್ನು ನೀಡಿರುವುದರಿಂದ ಜೆರಾಕ್ಸ್ ಯಂತ್ರವನ್ನು ಸರಿಪಡಿಸಿ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1501

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ವಿಷಯ:** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಡಿಜಿಟಲ್ ಪ್ರಿಂಟರ್ ದುರಸ್ತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2008 ದಿ:10.10.08.

2. ದಿ:5.8.2008ರ ಪತ್ರದ ಸಂಖ್ಯೆ: ರೀಕೋ 845/2008.

3. ದಿ:22–5–2009ರ ಪತ್ರದ ಸಂಖ್ಯೆ: ಕಸಂವಾಪ್ರ 38 ಸ್ವೀಮರ 2008.

**ಪ್ರಸ್ತಾವನೆ:**

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯಲ್ಲಿರುವ ಡಿಜಿಟಲ್ ಪ್ರಿಂಟರ್ ಯಂತ್ರವು ಹಾಳಾಗಿದ್ದು ಅದರ ದುರಸ್ತಿಗೆ ರೀಕೋ ಇಂಡಿಯಾ ಲಿಮಿಟೆಡ್‌ರವರಿಂದ ಮೇಲೆ ಓದಲಾದ ಉಲ್ಲೇಖ (2)ರಲ್ಲಿ ಅದರ ದರಪಟ್ಟಿಯನ್ನು ಸ್ವೀಕರಿಸಲಾಗಿದ್ದು ರೂ. 7818–00 (ಏಳು ಸಾವಿರದ ಎಂಟು ನೂರ ಹದಿನೆಂಟು ರೂ.ಗಳು ಮಾತ್ರ) ರೀಕೋ ಇಂಡಿಯಾ ಲಿಮಿಟೆಡ್ ಕಂಪನಿಯಿಂದ ಡಿಜಿಟಲ್ ಪ್ರಿಂಟರ್ ಯಂತ್ರವನ್ನು ರಿಪೇರಿ ಮಾಡಿಸಲು ತೀರ್ಮಾನಿಸಲಾಯಿತು. ರೀಕೋ ಕಂಪನಿಯು ನೀಡಿದ ದರಪಟ್ಟಿ ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ಕಂಪನಿಯ ಹೆಸರು | ವಿವರ | ಒಟ್ಟು ರೂ.ಗಳಲ್ಲಿ |
|---|---|---|---|
| 1 | ರೀಕೋ ಇಂಡಿಯಾ ಲಿಮಿಟೆಡ್ | ಡಿಜಿಟಲ್ ಪ್ರಿಂಟರ್ ದುರಸ್ತಿ | 7818–00 |

ಡಿಜಿಟಲ್ ಪ್ರಿಂಟರ್ ಯಂತ್ರವನ್ನು ಬೆಂಗಳೂರಿನ ರೀಕೋ ಇಂಡಿಯಾ ಲಿಮಿಟೆಡ್, ಜಿ7ಎ–ಜಿ9ಎ, ನೆಲಮಹಡಿ, ಸೀಯರ್ಸ್ ಪ್ಲಾಜಾ, ರೆಸಿಡೆನ್ಸಿ ರಸ್ತೆ, ಬೆಂಗಳೂರು–560025 ರವರಿಂದ ಖರೀದಿಸಿದ್ದು ಆ ಕಂಪನಿಯೇ ಯಂತ್ರವನ್ನು ದುರಸ್ತಿ ಪಡಿಸಬೇಕಾದುದರಿಂದ ಸದರಿ ಕಂಪನಿಯಿಂದ ಮಾತ್ರ ದರಪಟ್ಟಿ ಪಡೆದು ಸದರಿ ಯಂತ್ರವನ್ನು ದುರಸ್ತಿ ಪಡಿಸಲು ನಿರ್ಧರಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 38 ಸ್ವೀಮರ 2009, ಬೆಂಗಳೂರು, ದಿನಾಂಕ: 27ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯಲ್ಲಿರುವ ಡಿಜಿಟಲ್ ಯಂತ್ರದ ದುರಸ್ತಿಯ ಸಲುವಾಗಿ ರೀಕೋ ಇಂಡಿಯಾ ಲಿಮಿಟೆಡ್ ಕಂಪನಿಯಿಂದ ದರಪಟ್ಟಿಯನ್ನು ಪಡೆದಿದ್ದು ದರ ರೂ.6949–50 ಮತ್ತು ಶೇಕಡ 12.5 ವ್ಯಾಟ್ ಸೇರಿ ಒಟ್ಟು ರೂ. 7818–00 (ಏಳು ಸಾವಿರದ ಎಂಟು ನೂರ ಹದಿನೆಂಟು ರೂ.ಗಳು ಮಾತ್ರ) ಗಳನ್ನು ನೀಡಲು ಆದೇಶಿಸಿದೆ.

ಈ ವೆಚ್ಚವನ್ನು ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2008, ದಿನಾಂಕ:10–10–2008ರ ಆದೇಶದ್ವಯ ಭರಿಸುವುದು. ರೀಕೋ ಇಂಡಿಯಾ ಲಿಮಿಟೆಡ್ ಕಂಪನಿಗೆ ರೂ. 7818–00 ಮೊತ್ತವನ್ನು ಸಿಆಸುಇ ಲೆಕ್ಕಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ರೀಕೋ ಇಂಡಿಯಾ ಲಿಮಿಟೆಡ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯಲ್ಲಿರುವ ಡಿಜಿಟಲ್ ಯಂತ್ರವನ್ನು ಸರಿಪಡಿಸಿ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1502 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ವಿಷಯ:** ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಕಛೇರಿಗೆ ಸೃಜಿಸಲಾಗಿರುವ ಆಯುಕ್ತರ ಹುದ್ದೆಯನ್ನು ಮುಂದುವರೆಸುವ ಕುರಿತು.

**ಓದಲಾಗಿದೆ:** 1) ಆದೇಶ ಸಂಖ್ಯೆ: ಸಂಕಇ 12 ಕೆಎಂಯು 2004, ದಿ:25–3–2004.

2) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 9 ಕೆಎಂಯು 2006 ದಿ: 14–2–2006.

3) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 46 ಕೆಎಂಯು 2007 ದಿ: 26–3–2007

4) ಸರ್ಕಾರಿ ಆದೇಶ ಸಂಖ್ಯೆ ಸಂಕಇ 284 ಕೆಎಂಯು 2007 ದಿನಾಂಕ 04.02.2008

5) ಆಯುಕ್ತರು ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯವರ ಪತ್ರ ಸಂಖ್ಯೆ ಆಪ್ರಾಸಂಪ/ಇಎಸ್‌ಟಿ/ಆ.ಹು.ಮು./2008–09 ದಿನಾಂಕ 06.02.2009

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ದಿನಾಂಕ: 25–03–2004ರ ಸರ್ಕಾರಿ ಆದೇಶದಲ್ಲಿ ಹೊಸದಾಗಿ ಆಸ್ತಿತ್ವಕ್ಕೆ ಬಂದಿರುವ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಕಛೇರಿಗೆ ಭಾರತೀಯ ಆಡಳಿತ ಸೇವೆಯ ಸೂಪರ್‌ಟೈಮ್ ವೇತನ ಶ್ರೇಣಿಯಲ್ಲಿ (ರೂ.18400–500–22400) ಆಯುಕ್ತರ ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಮೇಲೆ ಓದಲಾದ (4)ರ ದಿನಾಂಕ: 04–02–2008ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ:11.2.2008ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿತ್ತು. ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು ಮೇಲೆ (5)ರಲ್ಲಿ ಓದಲಾದ ದಿನಾಂಕ: 06.02.2009ರ ಪತ್ರದಲ್ಲಿ ಪರಂಪರೆ ಇಲಾಖೆಯ ಕಾರ್ಯವ್ಯಾಪ್ತಿಯು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದ್ದು, ರಾಜ್ಯಾದ್ಯಂತ ವಿದ್ಯಾ ಸಂಸ್ಥೆಗಳ ಮೂಲಕ ವಿದ್ಯಾರ್ಥಿಗಳು ಹಾಗೂ ಸಾರ್ವಜನಿಕರಲ್ಲಿ

ಪಾರಂಪರಿಕ ಇತಿಹಾಸದ ತಿಳುವಳಿಕೆ ಮೂಡಿಸುವ ನಿಟ್ಟಿನಲ್ಲಿ ಪಾರಂಪರಿಕ ಕೂಟಗಳನ್ನು ಸ್ಥಾಪಿಸಲಾಗಿದ್ದು, ಕಾರ್ಯಕ್ರಮಗಳು ನಡೆಯುತ್ತಿವೆ ಎಂದು ತಿಳಿಸಿ, ಮೈಸೂರು ಶ್ರೀರಂಗಪಟ್ಟಣ, ಗುಲ್ಬರ್ಗ, ಕಿತ್ತೂರು, ಬಿಜಾಪುರ ಹಾಗೂ ಬೀದರ್ ನಗರಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾರ್ಯ ಪ್ರಗತಿಯಲ್ಲಿರುವುದರಿಂದ 2008–09ನೇ ಸಾಲಿನಲ್ಲಿ ಮಂಜೂರಾಗಿರುವ ಪರಂಪರಾ ಸಂರಕ್ಷಣಾ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದ್ದು, ಇದಕ್ಕಾಗಿ ಸಿದ್ದಪಡಿಸಿರುವ ಕ್ರಿಯಾ ಯೋಜನೆಗೆ ಸರ್ಕಾರವು ಅನುಮೋದನೆ ನೀಡಿರುವುದರಿಂದ ಮತ್ತು ಪ್ರಸಕ್ತ ಸಾಲಿಗೆ ಸರ್ಕಾರವು ಪರಂಪರೆ ಇಲಾಖೆಗೆ ಬಿಡುಗಡೆ ಮಾಡಿರುವ ಅನುದಾನವನ್ನು ಉದ್ದೇಶಿತ ಕಾರ್ಯಗಳಿಗೆ ಉಪಯೋಗಿಸಿಕೊಳ್ಳುವ ಸಲುವಾಗಿ ಪರಂಪರೆ ಆಯುಕ್ತರ ಹುದ್ದೆಯನ್ನು ದಿನಾಂಕ: 11.02.2009ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಸರ್ಕಾರದ ಆದೇಶ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 46 ಕೆಎಂಯು 2009, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಂಕಇ 12 ಕೆಎಂಯು 2004, ದಿನಾಂಕ: 25.3.2004 ರಲ್ಲಿ ಸೃಜಿಸಲಾಗಿರುವ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರಾ ಇಲಾಖೆ ಈ ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ: 11.2.2009ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರವು ಮುಂದುವರೆಸಿದೆ.

ಈ ಆದೇಶವನ್ನು ದಿನಾಂಕ 02.06.2009ರ ಆಂತರಿಕ ಆರ್ಥಿಕ ಸಲಹೆಗಾರರ ಅ.ಟಿ ಸಂಖ್ಯೆ ಶಿಇ 682 ಐಎಫ್‌ಎಸ್ 2009ರಲ್ಲಿ ನೀಡಿದ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1510

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಮಂಜೂರಾದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 45 ಕಸನಿ 2008 ದಿನಾಂಕ 05.7.2008

2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ 188 ಸಿಬ್ಬಂದಿ 1/ 2008–09 ದಿನಾಂಕ 19–3–2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 05.7.2008ರ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಇದ್ದ ಹುದ್ದೆಗಳನ್ನು 1–4–2008ರಿಂದ 31–3–2009ರವರೆಗೆ ಮುಂದುವರಿಸಲಾಗಿತ್ತು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ದಿನಾಂಕ 19–3–2009ರ ಪತ್ರದಲ್ಲಿ ಹಿಂದೆ ವಿಸ್ತರಿಸಲಾದ ಹುದ್ದೆಗಳ ಪೈಕಿ ಶೇಡಕ 80ರಷ್ಟು ಖಾಲಿ ಹುದ್ದೆಗಳ ರದ್ದತಿ ಕಾರ್ಯಕ್ರಮದ ಅಡಿ ರದ್ದಾದ ಹುದ್ದೆಗಳನ್ನು ಬಿಟ್ಟು ಉಳಿದ 88 ಹುದ್ದೆಗಳನ್ನು ದಿನಾಂಕ 1–4–2009ರಿಂದ 31–3–2010ರವರೆಗೆ ಮುಂದುವರಿಸಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 54 ಕಸನಿ 2008, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಮಂಜೂರಾದ ಈ ಆದೇಶದ ಅನುಬಂಧದಲ್ಲಿ ತೋರಿಸಿರುವ 88 ತಾತ್ಕಾಲಿಕ ಹುದ್ದೆಗಳನ್ನು 1–4–2009 ರಿಂದ 31.03.2010 ರವರೆಗೆ ಅಂದರೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 706 ಐಎಫ್‌ಎಸ್ 2009 ದಿನಾಂಕ 10.6.2009ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿ ಅವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ಅನುಬಂಧ**

| ಕ್ರ. ಸಂ. | ಮಂಜೂರಾದ ಹೊಸ ಘಟಕ / ಕಾರ್ಯಕ್ರಮಗಳು ಮತ್ತು ಸ್ಥಳ | ಲೆಕ್ಕ ಶೀರ್ಷಿಕೆ | ಹುದ್ದೆಗಳು / ಸಂಖ್ಯೆ | ವೇತನಶ್ರೇಣಿ ರೂ. | ವಿಸ್ತರಿಸಿದ ಅವಧಿ |
|---|---|---|---|---|---|
| 1. | ದಾವಣಗೆರೆ / ಬಾಗಲಕೋಟೆ / ಗದಗ / ಹಾವೇರಿ / ಕೊಪ್ಪಳ/ ಚಾಮರಾಜನಗರ / ಉಡುಪಿ – ಒಟ್ಟು 7 ಜಿಲ್ಲೆಗಳು<br>ಸೂಚನೆ: ಮೇಲ್ಕಂಡ ಬೆರಳಚ್ಚುಗಾರರ 7 ಹುದ್ದೆಗಳಲ್ಲಿ ಚಾಮರಾಜನಗರ ಹಾಗೂ ದಾವಣಗೆರೆ ಜಿಲ್ಲೆಗಳಲ್ಲಿನ ಸದರಿ ಹುದ್ದೆಯ ಲೆಕ್ಕ ಶೀರ್ಷಿಕೆ 2205–00–001–0–01 (ಯೋಜನೇತರ ಅಡಿಯಲ್ಲಿ) | 2205–00–001–0–01 (ಯೋಜನೇತರ) | **ಪ್ರತಿ ಜಿಲ್ಲೆಗೆ :**<br>1. ಸಹಾಯಕ ನಿರ್ದೇಶಕರು –1(ಒಂದು)<br>2. ಬೆರಳಚ್ಚುಗಾರ –1(ಒಂದು)<br>3. ದಲಾಯಿತ –1(ಒಂದು) | 11400–21600<br>5800–10500<br>4800–7275 | ದಿನಾಂಕ: 1–4–2009 ರಿಂದ 31–3–2010 ರವರೆವಿಗೆ |
| 2. | **ಜಿಲ್ಲಾ ರಂಗಮಂದಿರ:**<br>ಚಿಕ್ಕಮಗಳೂರು / ಕೋಲಾರ / ಶಿವಮೊಗ್ಗ / ತುಮಕೂರು / ಬಳ್ಳಾರಿ / ಬಿಜಾಪುರ / ಉತ್ತರ ಕನ್ನಡ / ರಾಯಚೂರು | 2205–ಕಲೆ ಮತ್ತು ಸಂಸ್ಕೃತಿ– 00–001 ನಿರ್ದೇಶನ ಮತ್ತು ಆಡಳಿತ–0–01–ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ (ಯೋಜನೇತರ) | **ಪ್ರತಿ ಜಿಲ್ಲೆಗೆ :**<br>1. ದ್ವಿತೀಯ ದರ್ಜೆ ಸಹಾಯಕ –1(ಒಂದು)<br>2. ಸೀನಿಯರ್ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್ ವೈಸರ್–1(ಒಂದು) (ಬಳ್ಳಾರಿ ಜಿಲ್ಲಾ ರಂಗಮಂದಿರ ಹೊರತುಪಡಿಸಿ)<br>3. ಗ್ರೂಪ್ 'ಡಿ' ನೌಕರ –1(ಒಂದು) (ಬಿಜಾಪುರ ಮತ್ತು ಉ.ಕ. ಜಿಲ್ಲೆಯ ರಂಗಮಂದಿರ ಹುದ್ದೆಗಳನ್ನು ಹೊರತುಪಡಿಸಿ) | 5800–10500<br>8825–16000<br>4800–7275 | ದಿನಾಂಕ: 1–4–2009 ರಿಂದ 31–3–2010 ರವರೆವಿಗೆ |
| 3. | ಮಂಡ್ಯ ಮತ್ತು ಬೆಳಗಾಂ ಜಿಲ್ಲಾ ರಂಗಮಂದಿರ | 2205–00–001–0–01 (ಯೋಜನೇತರ) | **ಪ್ರತಿ ಜಿಲ್ಲೆಗೆ :**<br>1. ದ್ವಿತೀಯ ದರ್ಜೆ ಸಹಾಯಕ –1(ಒಂದು)<br>2. ಗ್ರೂಪ್ 'ಡಿ' ನೌಕರ –1(ಒಂದು) | 5800–10500<br>4800–7275 | ದಿನಾಂಕ: 1–4–2009 ರಿಂದ 31–3–2010 ರವರೆವಿಗೆ |

ಕ್ರಮಸಂಖ್ಯೆ(2)4 ಕಾಲಂ (5)ರಲ್ಲಿ ಸೀನಿಯರ್ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಯ ವೇತನ ಶ್ರೇಣಿ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ.31 ಎಸ್.ಆರ್.ಪಿ.2007(VIII), ದಿನಾಂಕ: 14–8–2008ರ ಮೇರೆಗೆ ಹಾಲಿ ಇದ್ದ ವೇತನ ಶ್ರೇಣಿ ರೂ.6,250–12000ರನ್ನು ರೂ.8825–16000 ಎಂದು ಪರಿಷ್ಕರಿಸಲಾಗಿದೆ. ಅದರಂತೆ ಈ ಹುದ್ದೆ ವೇತನ ಶ್ರೇಣಿಯನ್ನು ಈ ಮೇಲೆ ತೋರಿಸಲಾಗಿದೆ.

| ಕ್ರ. ಸಂ. | ಮಂಜೂರಾದ ಹೊಸ ಘಟಕ / ಕಾರ್ಯಕ್ರಮಗಳು ಮತ್ತು ಸ್ಥಳ | ಲೆಕ್ಕ ಶೀರ್ಷಿಕೆ | ಹುದ್ದೆಗಳು / ಸಂಖ್ಯೆ | ವೇತನಶ್ರೇಣಿ ರೂ. | ವಿಸ್ತರಿಸಿದ ಅವಧಿ |
|---|---|---|---|---|---|
| 4. | ಮುಂದುವರಿದ ಯೋಜನಾ ಕಾರ್ಯಕ್ರಮದಡಿಯಲ್ಲಿ ಮಂಜೂರಾದ ಹುದ್ದೆಗಳು : | | | | |
| | 1. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1(ಒಂದು) | 10000–18150 | ದಿನಾಂಕ: 1–4–2009 ರಿಂದ 31–3–2010 ರವರೆವಿಗೆ (13 ಹುದ್ದೆಗಳು ಮಾತ್ರ) |
| | 2. ಕರ್ನಾಟಕ ಸಾಹಿತ್ಯ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1(ಒಂದು) | 10000–18150 | |
| | 3. ಕರ್ನಾಟಕ ಉರ್ದು ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1(ಒಂದು) | 10000–18150 | |
| | 4. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1(ಒಂದು) | 10000–18150 | |
| | 5. ಕರ್ನಾಟಕ ನಾಟಕ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1(ಒಂದು) | 10000–18150 | |
| | 6. ಕರ್ನಾಟಕ ಲಲಿತಕಲಾ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1(ಒಂದು) | 10000–18150 | |
| | 7. ಕನ್ನಡ ಭವನದ ನಿರ್ದೇಶನ ಮತ್ತು ಆಡಳಿತ | 2205–00–001–0–01 (ಯೋಜನೇತರ) | 1. ಸಹಾಯಕ ಗ್ರಂಥಪಾಲಕ –1(ಒಂದು) | 7275–13350 | |
| | | | 2. ಪ್ರಥಮ ದರ್ಜೆ ಸಹಾಯಕ –1 (ಒಂದು) | 7275–13350 | |
| | | | 3. ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್ ವೈಸರ್–1(ಒಂದು) | 8825–16000 | |
| | | | 4. ಅಟೆಂಡರ್ –1(ಒಂದು) | 5200–8200 | |
| | | | 5. ಮಾಲಿ –1(ಒಂದು) | 4800–7275 | |
| | | | 6. ಸ್ವೀಪರ್ –2(ಎರಡು) | 4800–7275 | |

ಕ್ರಮಸಂಖ್ಯೆ:4ರಡಿ ಉಪ ಕ್ರಮಸಂಖ್ಯೆ 21 ಕಾಲಂ 5ರಲ್ಲಿ ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಯ ವೇತನ ಶ್ರೇಣಿ ಸರ್ಕಾರದ ಆದೇಶ ಸಂಖ್ಯೆ ಎಫ್.ಡಿ.31 ಎಸ್.ಆರ್.ಪಿ. 2007(VIII), ದಿನಾಂಕ: 14–8–2008ರ ಮೇರೆಗೆ ಹಾಲಿ ಇದ್ದ ವೇತನ ಶ್ರೇಣಿ ರೂ.6,250–12000ರನ್ನು ರೂ.8825–16000 ಎಂದು ಪರಿಷ್ಕರಿಸಲಾಗಿದೆ. ಅದರಂತೆ ಈ ಹುದ್ದೆಯ ವೇತನ ಶ್ರೇಣಿ ಈ ಮೇಲೆ ತೋರಿಸಲಾಗಿದೆ.

| ಕ್ರ. ಸಂ. | ಮಂಜೂರಾದ ಹೊಸ ಘಟಕ / ಕಾರ್ಯಕ್ರಮಗಳು ಮತ್ತು ಸ್ಥಳ | ಲೆಕ್ಕ ಶೀರ್ಷಿಕೆ | ಹುದ್ದೆಗಳು / ಸಂಖ್ಯೆ | ವೇತನಶ್ರೇಣಿ ರೂ. | ವಿಸ್ತರಿಸಿದ ಅವಧಿ |
|---|---|---|---|---|---|
| 5. | 1. ಕೇಂದ್ರ ಕಚೇರಿ: | 2205–00–001–0–01 (ಯೋಜನೇತರ) | 1. ಕಾರ್ಯಕ್ರಮ ಅಧಿಕಾರಿ (ಜಂಟಿ ನಿರ್ದೇಶಕರು) –1(ಒಂದು)<br>2. ವಾಹನ ಚಾಲಕ –1(ಒಂದು)<br>3. ಆಡಳಿತಾಧಿಕಾರಿ (ಜಂಟಿ ನಿರ್ದೇಶಕರು) –1(ಒಂದು)<br>4. ವಾಹನ ಚಾಲಕ (ಕಾರ್ಯಕ್ರಮ ಅಧಿಕಾರಿಗೆ) –1(ಒಂದು) | 18150–26925<br>5800–10500<br>18150–26925<br>5800–10500 | ದಿನಾಂಕ: 1–4–2009 ರಿಂದ 31–3–2010 ರವರೆವಿಗೆ |
| | 2. ಅಂಚೆ ಮೂಲಕ ಕನ್ನಡ ಶಿಕ್ಷಣ | 2205–00–001–0–01 (ಯೋಜನೇತರ) | 1. ಪ್ರಥಮ ದರ್ಜೆ ಸಹಾಯಕ –1(ಒಂದು)<br>2. ಶೀಘ್ರಲಿಪಿಗಾರ –1(ಒಂದು)<br>3. ದಲಾಯಿತ –1(ಒಂದು) | 7275–13350<br>7275–13350<br>4800–7275 | |
| | 3. ಧಾರವಾಡ ಜಿಲ್ಲಾ ಕಚೇರಿ | 2205–00–001–0–01 (ಯೋಜನೇತರ) | 1. ವಾಹನ ಚಾಲಕ –1(ಒಂದು) | 5800–10500 | |
| | 4. ಬೆಂಗಳೂರು ಗ್ರಾಮಾಂತರ ಜಿಲ್ಲೆ | 2205–00–001–0–01 (ಯೋಜನೇತರ) | 1. ಸಹಾಯಕ ನಿರ್ದೇಶಕರು –1(ಒಂದು) | 11400–21600 | |
| | 5. ಕೇಂದ್ರ ಕಚೇರಿ (ತನಿಖಾ ಘಟಕ) | 2205–00–001–0–01 (ಯೋಜನೇತರ) | 1. ಲೆಕ್ಕಪತ್ರ ಅಧೀಕ್ಷಕರು –1(ಒಂದು)<br>2. ಪ್ರಥಮ ದರ್ಜೆ ಸಹಾಯಕ –1(ಒಂದು)<br>3. ಶೀಘ್ರಲಿಪಿಗಾರ –1(ಒಂದು) | 10800–20025<br>7275–13350<br>7275–13350 | |
| | 6. ಜಿಲ್ಲಾ ಕಚೇರಿ | 2205–00–001–0–01 (ಯೋಜನೇತರ) | 1. ವಾಹನ ಚಾಲಕ –2(ಎರಡು) | 5800–10500 | |

| ಕ್ರ. ಸಂ. | ಮಂಜೂರಾದ ಹೊಸ ಘಟಕ / ಕಾರ್ಯಕ್ರಮಗಳು ಮತ್ತು ಸ್ಥಳ | ಲೆಕ್ಕ ಶೀರ್ಷಿಕೆ | ಹುದ್ದೆಗಳು / ಸಂಖ್ಯೆ | ವೇತನಶ್ರೇಣಿ ರೂ. | ವಿಸ್ತರಿಸಿದ ಅವಧಿ |
|---|---|---|---|---|---|
| 6. | 1. ಜಿಲ್ಲಾ ಕಚೇರಿ (ಕನ್ನಡ ಅಭಿವೃದ್ಧಿ – ಯೋಜನೇತರ)<br>2. ಕೇಂದ್ರ ಕಚೇರಿ (ಕನ್ನಡ ಅಭಿವೃದ್ಧಿ – ಯೋಜನೇತರ)<br>3. ಅಕಾಡೆಮಿಯ ಕಾರ್ಯಾಲಯ (ನಿರ್ದೇಶನ ಮತ್ತು ಆಡಳಿತ) | 2205–00–001–0–01 (ಯೋಜನೇತರ)<br>2205–00–001–0–01 (ಯೋಜನೇತರ)<br>2205–00–001–0–01 (ಯೋಜನೇತರ) | 1. ಸಹಾಯಕ ನಿರ್ದೇಶಕರು –1(ಒಂದು)<br>2. ಬೆರಳಚ್ಚುಗಾರ –1(ಒಂದು)<br>3. ವಾಹನ ಚಾಲಕ –1(ಒಂದು)<br>1. ವಾಹನ ಚಾಲಕ –1(ಒಂದು) | 11400–21600<br>5800–10500<br>5800–10500<br>5800–10500 | ದಿನಾಂಕ: 1–4–2009 ರಿಂದ 31–3–2010 ರವರೆಗೆ (ಎಲ್ಲಾ 6 ಹುದ್ದೆಗಳು ಮಾತ್ರ) |
| 7. | ಕನ್ನಡ ಪುಸ್ತಕ ಪ್ರಾಧಿಕಾರ | 2205–00–102–1–46 (ಯೋಜನೇತರ) | 1. ಸಹಾಯಕ ನಿರ್ದೇಶಕರು –1(ಒಂದು)<br>2. ಲೆಕ್ಕಪತ್ರ ಅಧೀಕ್ಷಕರು –1(ಒಂದು)<br>3. ಪ್ರಥಮ ದರ್ಜೆ ಸಹಾಯಕ –1(ಒಂದು)<br>4. ಬೆರಳಚ್ಚುಗಾರ –1(ಒಂದು)<br>5. ಗ್ರೂಪ್ 'ಡಿ' –1(ಒಂದು) | 11400–21600<br>10000–18150<br>7275–13350<br>5800–10500<br>4800–7275 | ದಿನಾಂಕ: 1–4–2009 ರಿಂದ 31–3–2010 ರವರೆಗೆ |
| 8. | **ಜಿಲ್ಲಾ ರಂಗಮಂದಿರ :**<br>ಬೀದರ್ ಮತ್ತು ಹಾಸನ | 2205–00–001–0–01 (ಯೋಜನೇತರ) | 1. ದ್ವಿತೀಯ ದರ್ಜೆ ಸಹಾಯಕ –2(ಎರಡು)<br>2. ಸೀನಿಯರ್ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್ ವೈಸರ್–2(ಎರಡು)<br>3. ಗ್ರೂಪ್ 'ಡಿ' –2(ಎರಡು) (ಜಿಲ್ಲೆಗೆ 1ರಂತೆ) | 5800–10500<br>8825–16000<br>4800–7275 | ದಿನಾಂಕ: 1–4–2009 ರಿಂದ 31–3–2010 ರವರೆವಿಗೆ |

ಕ್ರಮಸಂಖ್ಯೆ 8ರ ಕಾಲಂ 2ರಲ್ಲಿ ತಿಳಿಸಿರುವ ಸೀನಿಯರ್ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಯ ವೇತನ ಶ್ರೇಣಿ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ.31 ಎಸ್.ಆರ್.ಪಿ. 2007(VIII), ದಿನಾಂಕ: 14–8–2008ರ ಮೇರೆಗೆ ಹಾಲಿ ಇದ್ದ ವೇತನ ಶ್ರೇಣಿ ರೂ.6,250–12000ರನ್ನು ರೂ.8825–16000 ಎಂದು ಪರಿಷ್ಕರಿಸಲಾಗಿದೆ. ಅದರಂತೆ ಈ ಹುದ್ದೆಯ ವೇತನ ಶ್ರೇಣಿ ಈ ಮೇಲೆ ತೋರಿಸಲಾಗಿದೆ.

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

ಪಿ.ಆರ್. 1511

**ವಿಷಯ:** ಕನ್ನಡ ಭವನ ಹಾಗೂ ರವೀಂದ್ರ ಕಲಾಕ್ಷೇತ್ರಕ್ಕೆ ನೊಂದಾಯಿತ ಏಜೆನ್ಸಿಗಳಿಂದ ಗುತ್ತಿಗೆ ಆಧಾರದ ಮೇಲೆ ಸ್ವಾಗತಗಾರ ಲಿಫ್ಟ್ ಆಪರೇಟರ್, ಸ್ವಚ್ಛತಾ ಸಿಬ್ಬಂದಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅವರ ಪತ್ರ ಸಂಖ್ಯೆ: ಕಸನಿ:ಕಭ:ಗುಸೇ:3:2008–09 ದಿನಾಂಕ 27.06.2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 27.06.2008ರ ಪತ್ರದಲ್ಲಿ ಕನ್ನಡ ಭವನ ಹಾಗೂ ರವೀಂದ್ರ ಕಲಾಕ್ಷೇತ್ರಕ್ಕೆ ಸ್ವಚ್ಛತೆ ಹಾಗೂ ನಿರ್ವಹಣೆ ಕುರಿತು ಸ್ವಾಗತಗಾರ ಲಿಫ್ಟ್ ಆಪರೇಟರ್, ಸ್ವಚ್ಛತಾ ಸಿಬ್ಬಂದಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ನೊಂದಾಯಿತ ಏಜೆನ್ಸಿಗಳಿಂದ ಟೆಂಡರ್ ಆಹ್ವಾನಿಸಲಾಗಿದ್ದು, ಕಾರ್ಮಿಕ ಗುತ್ತಿಗೆ ಕಾಯ್ದೆ ಅನ್ವಯ ಮಜೂರಿ ದರಗಳನ್ನು ನಮೂದಿಸಿದ್ದ ಮೆ. ಶಕ್ತಿ ಸೆಕ್ಯೂರಿಟಿ ಆಂಡ್ ಅಲೈಡ್ ಸರ್ವಿಸಸ್ ನಂ.6, 2ನೇ ಮಹಡಿ, ಬೀರೇಶ್ವರ ದೇವಾಲಯ, ಬಾಪೂಜಿ ನಗರ, ಬೆಂಗಳೂರು ರವರ ದರವನ್ನು ಒಪ್ಪಿ ಒಂದು ವರ್ಷದ ಅವಧಿಗೆ ದಿನಾಂಕ 1.07.2008 ರಿಂದ 30.06.2009ರವರೆಗೆ ಈ ಕೆಳಕಂಡ ಹುದ್ದೆಗಳಿಗೆ ನಿಯೋಜಿಸಲು ಅನುಮತಿ ನೀಡಲಾಗಿದೆಯೆಂದು ತಿಳಿಸಿರುತ್ತಾರೆ.

| ಕ್ರ. ಸಂ. | ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸ್ವಾಗತಗಾರರು | 1 |
| 2 | ಲಿಫ್ಟ್ ನಿರ್ವಾಹಕ | 2 |
| 3 | ಸ್ವಚ್ಛತಾಗಾರರು | 11 |

ಈ ಉದ್ದೇಶಿತ ಕಾರ್ಯಕ್ಕೆ ಒಂದು ವರ್ಷ ಅವಧಿಗೆ ಒಟ್ಟು ರೂ.6,22,136.76 ವೆಚ್ಚ ಬರಲಿದ್ದು ಸದರಿ ವೆಚ್ಚಕ್ಕೆ ಅನುಸಮರ್ಥನೆ ನೀಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 77 ಕಸನಿ 2008, ಬೆಂಗಳೂರು, ದಿನಾಂಕ: 4ನೇ ಜೂನ್ 2009**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ರವರು ಕನ್ನಡ ಭವನ ಹಾಗೂ ರವೀಂದ್ರ ಕಲಾಕ್ಷೇತ್ರಕ್ಕೆ ನೊಂದಾಯಿತ ಏಜೆನ್ಸಿಗಳಿಂದ ಗುತ್ತಿಗೆ ಆಧಾರದ ಮೇಲೆ ಸ್ವಾಗತಗಾರ ಲಿಫ್ಟ್ ಆಪರೇಟರ್, ಸ್ವಚ್ಛತಾ ಸಿಬಂದಿಗಳನ್ನು ದಿನಾಂಕ:01.07.2008 ರಿಂದ 30.06.2009 ರವರೆಗೆ ನೇಮಕ ಮಾಡಿರುವ ಪ್ರಸ್ತಾವನೆಗೆ ಅನುಸಮರ್ಥನೆ ನೀಡಿ ಇದಕ್ಕೆ ತಗಲುವ ವೆಚ್ಚ ರೂ.6,22.136.76 (ರೂಪಾಯಿ ಆರು ಲಕ್ಷದ ಇಪ್ಪತ್ತೆರಡು ಸಾವಿರದ ಒಂದನೂರ ಮೂವತ್ತಾರು ಮತ್ತು ಪೈಸೆ ಎಪ್ಪತ್ತಾರು ಮಾತ್ರ)ಗಳನ್ನು ಮೆ. ಶಕ್ತಿ ಸೆಕ್ಯೂರಿಟಿ ಆ್ಯಂಡ್ ಅಲೈಡ್ ಸರ್ವಿಸಸ್, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಅನುಮತಿ ನೀಡಿದೆ.

1) ಈ ಉದ್ದೇಶಕ್ಕೆ ತಗಲುವ ವೆಚ್ಚವನ್ನು ರವೀಂದ್ರ ಕಲಾಕ್ಷೇತ್ರ ನಿರ್ವಹಣೆಗಾಗಿ ಒದಗಿಸಲಾಗಿರುವ ಆಯವ್ಯಯದ ಅಡಿಯಲ್ಲಿಯೇ ಭರಿಸತಕ್ಕದ್ದು.
2) ಈ ಯೋಜನೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು
3) ಬಿಡುಗಡೆ ಮಾಡಲಾದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಬಳಸತಕ್ಕದ್ದು.
4) ಹಣ ಬಳಕೆ ಪ್ರಮಾಣಪತ್ರವನ್ನು ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2009–10ನೇ ಸಾಲಿನಲ್ಲಿ ರವೀಂದ್ರ ಕಲಾಕ್ಷೇತ್ರದ ನಿರ್ವಹಣೆಗಾಗಿ ಒದಗಿಸಲಾದ ಆಯವ್ಯಯ ಲೆಕ್ಕಶೀರ್ಷಿಕೆ 4202–04–800–1–01–139 (ಯೋಜನೆ) ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 198 ವೆಚ್ಚ–7 2009 ದಿನಾಂಕ 21.03.2009ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1573

**ವಿಷಯ:** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಲೇಖನ ಸಾಮಗ್ರಿಗಳ ಸರಬರಾಜು ಮಾಡಿರುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2008 ದಿ:10.10.08.

2. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ಶಾಖೆಗಳ ಮನವಿ.

3. ದಿ:19–3–09ರ ಸರ್ಕಾರದ ಪತ್ರ : ಕಸಂವಾಪ್ರ 63 ಸ್ವೀಮರ 2009.

4. ದಿ:20–3–09ರ ರವಿ ಏಜೆನ್ಸೀಸ್‌ರವರ ಪತ್ರ ಸಂಖ್ಯೆ: ಆರ್.ಎ. 239/07/09.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಮನವಿಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ವಿವಿಧ ಶಾಖೆಗಳು ಲೇಖನ ಸಾಮಗ್ರಿಗಳಿಗಾಗಿ ಮನವಿ ಸಲ್ಲಿಸಿದ್ದೆವು.

ಮೇಲೆ ಓದಲಾದ (3)ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಬೇಕಾಗಿರುವ ಲೇಖನ ಸಾಮಗ್ರಿಗಳನ್ನು ಖರೀದಿಸಲು 03 ಕಂಪನಿಗಳಿಂದ ದರಪಟ್ಟಿ ನೀಡುವಂತೆ ಕೋರಲಾಗಿತ್ತು. ಹಾಗೂ ಅದರಂತೆ 03 ಕಂಪನಿಗಳಿಂದ ಸ್ವೀಕೃತವಾದ ದರಪಟ್ಟಿಯನ್ವಯ ಇಲಾಖೆಗೆ ಅಗತ್ಯವಾಗಿ ಬೇಕಾಗುವ ಸಾಮಗ್ರಗಳ ಒಟ್ಟು ದರಪಟ್ಟಿಯು ಈ ಕೆಳಗಿನಂತಿರುತ್ತದೆ. ಹಾಗೂ 3 ಕಂಪನಿಗಳ ಲೇಖನ ಸಾಮಗ್ರಿಗಳ ದರ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

| ಕ್ರ. ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ ರೂ.ಗಳಲ್ಲಿ | ಒಟ್ಟು ರೂ.ಗಳಲ್ಲಿ |
|---|---|---|---|---|---|
| 1 | ರವಿ ಏಜೆನ್ಸೀಸ್ | ಲೇಖನ ಸಾಮಗ್ರಿಗಳು | ಅನುಬಂಧದಲ್ಲಿ ಲಗತ್ತಿಸಲಾಗಿದೆ | | 23,946=17 |
| 2 | ಶಂಕರ್ ಪಿ ಮಾರ್ಟ್ | ಲೇಖನ ಸಾಮಗ್ರಿಗಳು | | | 24,435=38 |
| 3 | ಜನತಾ ಬಜಾರ್ | ಲೇಖನ ಸಾಮಗ್ರಿಗಳು | | | 26,678=18 |

ಈ ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಬೆಂಗಳೂರಿನ ಅವಿನ್ಯೂ ರಸ್ತೆಯಲ್ಲಿರುವ ರವಿ ಏಜೆನ್ಸೀಸ್, # 448, ಬೆಂಗಳೂರು–560001ರವರಿಗೆ ರೂ.23,946=17 ಗಳ (ಇಪ್ಪತ್ಮೂರು ಸಾವಿರದ ಒಂಬೈನೂರ ನಲ್ವತ್ತಾರು ರೂ.ಗಳು ಹಾಗೂ ಹದಿನೇಳು ಪೈಸೆ ಮಾತ್ರ) ವೆಚ್ಚದಲ್ಲಿ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಈ ಕೆಳಕಂಡಂತೆ ಆದೇಶಿಸಿದೆ. ದರಪಟ್ಟಿಯು ವ್ಯಾಟ್ ತೆರಿಗೆ ಹಾಗೂ ಸಾಗಾಣೆ ವೆಚ್ಚಗಳನ್ನು ಒಳಗೊಂಡಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 63 ಸ್ವೀಮರ 2009, ಬೆಂಗಳೂರು, ದಿನಾಂಕ: 23ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು 03 ಕಂಪನಿಗಳಿಂದ ದರಪಟ್ಟಿಗಳನ್ನು ಕರೆದಿದ್ದು ಅನುಬಂಧದಲ್ಲಿರುವ ಲೇಖನ ಸಾಮಗ್ರಿಗಳಿಗೆ ಅತಿ ಕಡಿಮೆ ದರ ರೂ.23,946=17 (ಇಪ್ಪತ್ತಮೂರು ಸಾವಿರದ ಒಂಬೈನೂರ ನಲವತ್ತ ಆರು ರೂ.ಗಳು ಮಾತ್ರ) ಗಳನ್ನು ಸೂಚಿಸಿರುವ ಬೆಂಗಳೂರಿನ ಅವಿನ್ಯೂ ರಸ್ತೆಯ # 448, ರವಿ ಏಜೆನ್ಸೀಸ್‌ರವರಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಆದೇಶ ನೀಡಿದೆ.

ಈ ವೆಚ್ಚವನ್ನು ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2008, ದಿನಾಂಕ:10–10–2008ರಲ್ಲಿ ನೀಡಿರುವ ಆದೇಶದನ್ವಯ ಭರಿಸಲು ರವಿ ಏಜೆನ್ಸೀಸ್ ಕಂಪನಿಗೆ ರೂ.23,946=17 (ಇಪ್ಪತ್ತಮೂರು ಸಾವಿರದ ಒಂಬೈನೂರ ನಲವತ್ತ ಆರು ರೂ.ಗಳು ಮಾತ್ರ) ಮೊತ್ತವನ್ನು ಸಿಆಸುಇ ಲೆಕ್ಕ ಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ರವಿ ಏಜೆನ್ಸೀಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಕೂಡಲೇ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವುದು ಹಾಗೂ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ಅನುಬಂಧ**

**Ravi Agencies**

| Sl. No. | Particulars | Each Qty Rate | Qty | Rate + Vat | Total Amount |
|---|---|---|---|---|---|
| 1 | ಸೆಲೋ ಟೇಪ್ | 11-00 | 02 | 22-00+ 0-88 | 22=88 |
| 2 | ಮಾರ್ಕರ್ ಪೆನ್ನು | 18-00 | 01 | 18-00+ 0-72 | 18=72 |
| 3 | ರೀಫಿಲ್ ಬ್ಲೂ | 4-00 | 10 | 40-00+ 1-60 | 41=60 |
| 4 | Xerox Toner MOD-SHARP AR-M 205 | 6450-00 | 01 | 6450-00+ 806-25 | 7256=25 |
| 5 | ಪ್ರಿಂಟರ್ ಕಾಟ್ರೇಜ್ (3224) | 5022-00 | 01 | 5022-00+ 627-75 | 5649=75 |
| 6 | ಮಲ್ಟಿಪಲ್ ಡಿವೈಸ್ ಕಾಟ್ರೇಜ್ (5020) | 1950-00 | 01 | 1950-00+ 243-75 | 2193=75 |
| 7 | ರೀಕೋ ಜೇರಾಕ್ಸ್ ಯಂತ್ರಕ್ಕೆ ಟೋನರ್ (ಎಫ್‌ಟಿ 4621) | 2645-00 | 01 | 2645-00+ 330-62 | 2975=62 |
| 8 | ಫ್ಯಾಕ್ಸ್ ರೋಲ್ | 78-00 | 20 | 1560-00+ 62-40 | 1622=40 |
| 9 | ಕಲರ್ ಸ್ಟಿಕ್ಕರ್ಸ್ | 55-00 | 02 | 110-00+ 4-40 | 114=40 |
| 10 | Dot Matrix Printer ribbon | 145-00 | 05 | 725-00+ 29-00 | 754=00 |
| 11 | 895 cx I Printer-U Cartridge<br>Black HP 15<br>Colour HP 78 | <br>1320-00<br>1850-00 | <br>01<br>01 | <br>1320-00+ 52-80<br>1850-00+ 74-00 | <br>1372=80<br>1924=00 |
| | | | | **Total** | **23,946=17** |

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1602 ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ವಿಷಯ:** ಕನ್ನಡ ಆಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನ ಆಯವ್ಯಯದ ಯೋಜನೇತರ ಮೊಬಲಗಿನ ಮೋದಲನೇ ಕಂತನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ್ರಾ/ಕಾ/79/ 2008–09 ದಿನಾಂಕ: 25–5–2009

**ಪ್ರಸ್ತಾವನೆ:**

ಕನ್ನಡ ಆಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಬಾಬ್ತಿನಲ್ಲಿ ರೂ.50.48 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ದಿನಾಂಕ:25.5.2009ರ ಪತ್ರದಲ್ಲಿ ಪ್ರಾಧಿಕಾರದ ಅಧ್ಯಕ್ಷರ ಅಧಿಕಾರಿ/ಸಿಬ್ಬಂದಿ, ವೇತನ, ಇಂಧನ ವೆಚ್ಚ, ಇತರೆ ವೆಚ್ಚಗಳು, ಕಾರ್ಯದರ್ಶಿ ಹಾಗೂ ಕಛೇರಿ ಸಿಬ್ಬಂದಿ ವೆಚ್ಚ, ವಾಹನ ನಿರ್ವಹಣೆಗೆ 2009–10ನೇ ಸಾಲಿನ ಆಯವ್ಯಯದಲ್ಲಿ ನಿಗದಿಪಡಿಸಿದ ಅನುದಾನ ರೂ.50.48 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 28 ಕೆಎಲ್ 2009, ಬೆಂಗಳೂರು, ದಿನಾಂಕ: 24ನೇ ಜೂನ್ 2009**

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನಲ್ಲಿ ನಿಗದಿಪಡಿಸಿರುವ ಯೋಜನೇತರ ಅನುದಾನ ರೂ.50.48 ಲಕ್ಷಗಳಲ್ಲಿ ಮೊದಲ ಕಂತು ಮೊತ್ತ ರೂ.25.24 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷದ ಇಪ್ಪತ್ನಾಲ್ಕು ಸಾವಿರಗಳು ಮಾತ್ರ) ಬಿಡುಗಡೆ ಮಾಡಿದೆ. ಈ ಸಂಬಂಧ ವೆಚ್ಚವನ್ನು 2009–10ನೇ ಸಾಲಿನ ಯೋಜನೇತರ ಆಯವ್ಯಯ ಲೆಕ್ಕಶೀರ್ಷಿಕೆ 2052–00–092–0–09–101 ಯೋಜನೇತರ ಅಡಿಯಲ್ಲಿ ಭರಿಸತಕ್ಕದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 1226 ಐಎಫ್(ಬಿ&ಎ) 2009 ದಿನಾಂಕ: 03–06–2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1644 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಿಗೆ ಹೊಸ ವಾಹನವನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಂಕಇ 16 ಕೆಎಲ್ 2008 ದಿನಾಂಕ: 10.6.2008.

2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ/15/ಕಪುಪಾ.ವಾ/2008–09 ದಿನಾಂಕ 26.6.2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:10.6.2008ರ ಅಧಿಸೂಚನೆಯಲ್ಲಿ ಡಾ:ಸಿದ್ದಲಿಂಗಯ್ಯರವರಿಗೆ ರಾಜ್ಯ ಸಚಿವರ ಸ್ಥಾನಮಾನ ನೀಡಿ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರ ಹುದ್ದೆಗೆ ನೇಮಿಸಲಾಗಿರುತ್ತದೆ. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 26.6.2008ರ ಪತ್ರದಲ್ಲಿ ಡಾ:ಸಿದ್ದಲಿಂಗಯ್ಯರವರು ದಿನಾಂಕ:12.6.2008ರಂದು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಿದ್ದು, ಅಧ್ಯಕ್ಷರ ಕಛೇರಿಯ ಕೆಲಸ ಕಾರ್ಯಗಳಿಗೆ ಹೊಸ ವಾಹನ ಅಗತ್ಯವಿದ್ದು, ಅದಕ್ಕಾಗಿ ಒಂದು ಹೊಸ ಹುಂಡೈ ವರ್ನಾ ವಾಹನವನ್ನು ಖರೀದಿಸಲು ಅನುಮೋದನೆ ಹಾಗೂ ಅಗತ್ಯ ಅನುದಾನ ನೀಡಬೇಕೆಂದು ಆಡಳಿತಾಧಿಕಾರಿ ಕನ್ನಡ ಪುಸ್ತಕ ಪ್ರಾಧಿಕಾರರವರು ಕೋರಿರುವ ಹಿನ್ನೆಲೆಯಲ್ಲಿ ಮತ್ತು ಈ ಹಿಂದೆ ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ ನೀಡಲಾಗಿದ್ದ ವಾಹನವನ್ನು ಸರ್ಕಾರದ ಸೂಚನೆಯಂತೆ ಹಿಂದಕ್ಕೆ ಪಡೆದಿರುವುದರಿಂದ ಮಾನ್ಯ ಅಧ್ಯಕ್ಷರಿಗೆ ಹೊಸ ಹುಂಡೈ ವರ್ನಾ ವಾಹನವನ್ನು ಖರೀದಿಸಲು ಅಗತ್ಯ ಅನುದಾನ ರೂ.10,56,290 (7,56,290+3ಲಕ್ಷ ಇಂಧನಕ್ಕೆ) ಬಿಡುಗಡೆ ಮಾಡಲು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 73 ಕಸನಿ 2008, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರ ಉಪಯೋಗಕ್ಕಾಗಿ ಒಂದು ಹೊಸ ಹುಂಡೈ ವರ್ನಾ ಕಾರನ್ನು ರೂ.11.00 ಲಕ್ಷಗಳ ಮಿತಿಯೊಳಗೆ (ರೂಪಾಯಿ ಹನ್ನೊಂದು ಲಕ್ಷಗಳು ಮಾತ್ರ) ಖರೀದಿಸಲು ಸರ್ಕಾರದ ಅನುಮತಿ ನೀಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ ನಿಗಧಿಪಡಿಸಿರುವ ಲೆಕ್ಕಶೀರ್ಷಿಕೆ2205–00–102–1–46–059ರಡಿ ಭರಿಸತಕ್ಕದ್ದು. ಪ್ರಸ್ತುತ ಅತಿಥಿಗೃಹದಿಂದ ಪಡೆದಿರುವ ಲ್ಯಾನ್ಸರ್ ವಾಹನವನ್ನು ಅತಿಥಿಗೃಹಕ್ಕೆ ಹಿಂತಿರುಗಿಸಲು ಸೂಚಿಸಿದೆ.

ಈ ಆದೇಶವನ್ನು ಸಿ.ಆ.ಸು.ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಸಿಆಸುಇ 87 ಶಿವಾನೀ 2009 ದಿನಾಂಕ:25.05.2009 ಹಾಗೂ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 385 ವೆಚ್ಚ–7/2009 ದಿನಾಂಕ:20.04.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1645 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಇವರಿಗೆ ವಾನಹ ಸೌಲಭ್ಯ ಒದಗಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ:ಕಸಂವಾಪ್ರ 6 ಕೆಎಲ್ 2009 (ಭಾಗ–4) ದಿನಾಂಕ: 25.2.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 25–2–2009ರ ಅಧಿಸೂಚನೆಯಲ್ಲಿ ಶ್ರೀ ಬೆಲ್ಲದ ಚಂದ್ರಕಾಂತ ಗುರಪ್ಪ, ಮಾನ್ಯ ಶಾಸಕರು, ಹುಬ್ಬಳ್ಳಿ– ಧಾರವಾಡ – ಪಶ್ಚಿಮ ಕ್ಷೇತ್ರ, ಇವರನ್ನು **'ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ'**ದ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದ್ದು, ಅವರಿಗೆ ಕಛೇರಿ ಉಪಯೋಗಕ್ಕಾಗಿ ವಾಹನ ಸೌಲಭ್ಯ ಒದಗಿಸುವ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಕಸಂವಾಪ್ರ 29 ಕೆಎಲ್ 2009, ಬೆಂಗಳೂರು, ದಿನಾಂಕ: 2ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಅವರಿಗೆ ಹೊಸ ವಾಹನವನ್ನು (ಕಾರು) ರೂ.11.00ಲಕ್ಷಗಳ ಮಿತಿಯಲ್ಲಿ ಖರೀದಿಸಲು ಸರ್ಕಾರದ ಅನುಮತಿ ನೀಡಿದೆ. ಈ ಸಂಬಂಧ ವೆಚ್ಚವನ್ನು ಪ್ರಾಧಿಕಾರಕ್ಕೆ 2009–10ನೇ ಸಾಲಿಗೆ ನಿಗದಿಪಡಿಸಿದ ಆಯವ್ಯಯದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ:25.6.09ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 578 ವೆಚ್ಚ–7/2009ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1713 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ – 2009–10ನೇ ಸಾಲಿಗೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರ ಪತ್ರ ಸಂಖ್ಯೆ–ಕಸಸಂ/ಅನುದಾನ/ಬಿಡುಗಡೆ/ 2009–10, ದಿನಾಂಕ:26–05–2009.

2. ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ:ಡಿಎಸ್‌ಕೆ/ಇಎಸ್‌ಟಿ/ಎಂಪಿಕ್/2009–10, ದಿನಾಂಕ:18–06–2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ದಿನಾಂಕ:26–05–2009ರ ಪತ್ರದಲ್ಲಿ ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂರವರು ಸಕ್ಕರೆ ಸಂಸ್ಥೆಯ ಆಡಳಿತ ಕಛೇರಿ, ವಾಚನಾಲಯ, ಪ್ರಯೋಗಾಲಯ, ಸಂಶೋಧನಾ ವಿಭಾಗ, ಕಾಂಪೌಂಡ್ ಗೋಡೆ ನಿರ್ಮಾಣ, ಅವಶ್ಯವಿದ್ದಷ್ಟು ರಸ್ತೆ ನಿರ್ಮಾಣ, ನೀರು ಪೂರೈಕೆ ಹಾಗೂ ವಿದ್ಯುದ್ದೀಕರಣ ಕಾಮಗಾರಿಗಳನ್ನು ಕೈಗೊಳ್ಳಲು ಹಾಗೂ ಆಡಳಿತ ವೆಚ್ಚ, ತರಬೇತಿ, ಕಾರ್ಯಗಾರ ಮುಂತಾದ ಕಾರ್ಯಕ್ರಮ ಕೈಗೊಳ್ಳಲು ಹಣದ ಅವಶ್ಯಕತೆ ಇದ್ದು, 2009–10ನೇ ಸಾಲಿನಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಗೆ ಅನುದಾನದಲ್ಲಿ ಒದಗಿಸಲಾಗಿರುವ 170.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಮೇಲೆ ಓದಲಾದ (2)ರಲ್ಲಿರುವ ದಿನಾಂಕ:18–06–2009ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿರವರು 2009–10ನೇ ಸಾಲಿನ ಅನುದಾನದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂರವರಿಗೆ ಸಂಸ್ಥೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಒದಗಿಸಲಾಗಿರುವ 170.00 ಲಕ್ಷ ರೂ.ಗಳಲ್ಲಿ ಮೊದಲ ತ್ರೈಮಾಸಿಕಕ್ಕೆ 22.00 ಲಕ್ಷ ರೂ.ಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಕೋರಿದ್ದಾರೆ.

ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 114 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ: 1ನೇ ಜುಲೈ 2009**

ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ರವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ಕರ್ನಾಟಕ ಸಕ್ಕರೆ ಸಂಸ್ಥೆಯ ಆಡಳಿತ ಕಛೇರಿ, ವಾಚನಾಲಯ, ಪ್ರಯೋಗಾಲಯ, ಸಂಶೋಧನಾ ವಿಭಾಗ, ಕಾಂಪೌಂಡ್ ಗೋಡೆ ಇವುಗಳ ನಿರ್ಮಾಣ, ಅವಶ್ಯವಿದ್ದಷ್ಟು ರಸ್ತೆ ನಿರ್ಮಾಣ, ನೀರು ಪೂರೈಕೆ ಹಾಗೂ ವಿದ್ಯುದ್ದೀಕರಣ ಕಾಮಗಾರಿಗಳನ್ನು ಕೈಗೊಳ್ಳಲು ಹಾಗೂ ಆಡಳಿತ ವೆಚ್ಚ, ತರಬೇತಿ, ಕಾರ್ಯಗಾರ ಮುಂತಾದ ಕಾರ್ಯಕ್ರಮ ಕೈಗೊಳ್ಳಲು ಈ ಸಂಸ್ಥೆಗೆ 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852–08–201–0–04ರಡಿ ಒದಗಿಸಲಾಗಿರುವ ರೂ. 170 ಲಕ್ಷ ಗಳಲ್ಲಿ, ಮೊದಲನೇ ತ್ರೈಮಾಸಿಕಕ್ಕೆ ರೂ. 42.50 ಲಕ್ಷಗಳನ್ನು (ನಲವತ್ತೆರಡು ಲಕ್ಷ ಐವತ್ತು ಸಾವಿರ ರೂ.ಗಳು ಮಾತ್ರ) ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಇವರ ಮೇಲು ರುಜು ಪಡೆದು ಸದರಿ ಹಣವನ್ನು ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1506

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ(ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** **"ದಿ ಗೋದಾವರಿ ಬಯೋರಿಫೈನರೀಸ್ ಲಿ."** (ದಿ. ಗೋದಾವರಿ ಶುಗರ್ ಮಿಲ್ಸ್ (ಲಿ)), ಸಮೀರವಾಡಿ, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 7500 ಟಿಸಿಡಿ ಯಿಂದ 15000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿನಾಂಕ 11.09.2007.

2. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ:ಡಿಎಸ್‌ಕೆ/ಡಿಇವಿ/89/2008–09 ದಿನಾಂಕ:16.04.2009.

**ಪ್ರಸ್ತಾವನೆ:**

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ **"ದಿ ಗೋದಾವರಿ ಬಯೋರಿಫೈನರೀಸ್ ಲಿ."** (ದಿ. ಗೋದಾವರಿ ಶುಗರ್ ಮಿಲ್ಸ್ (ಲಿ)), ಸಮೀರವಾಡಿ, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯು ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 7500 ಟಿಸಿಡಿ ಇಂದ 15000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು

ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 86 ಎಸ್‌ಜಿಎಫ್ 09 ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಮೆ. **"ದಿ ಗೋದಾವರಿ ಬಯೋರಿಫೈನರೀಸ್ ಲಿ."** (ದಿ. ಗೋದಾವರಿ ಶುಗರ್ ಮಿಲ್ಸ್ (ಲಿ)), ಸಮೀರವಾಡಿ, ಬಾಗಲಕೋಟೆ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 7500 ಟಿಸಿಡಿ ಇಂದ 15000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು, ಕಾರ್ಖಾನೆಗೆ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಕಾರ್ಖಾನೆಗೆ ಹಂಚಿಕೆಯಾಗಿರುವ ಕಬ್ಬಿನ ಮೀಸಲು ಪ್ರದೇಶಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಮೂಲಕ ಪಡೆದುಕೊಳ್ಳಬೇಕೆಂದು, ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1583 **ಪಿ. ಆನಂದಕುಮಾರ್**

ಪೀಠಾಧಿಕಾರಿ(ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು 2006–07ನೇ ಸಾಲಿಗೆ.

**ಓದಲಾಗಿದೆ:** 1) ದಿನಾಂಕ 12.04.2007ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.

2) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 13.06.07.

3) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 12.09.07

4) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (2) ದಿನಾಂಕ: 19.10.07

5) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (3) ದಿನಾಂಕ: 02.11.2007.

6) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–02 (4)) ದಿನಾಂಕ: 01.01.08.

7) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (6) ದಿನಾಂಕ: 22.02.08.

8) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ: 12.03.2008

9) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (7) ದಿನಾಂಕ: 20.03.08

10) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (8) ದಿನಾಂಕ: 25.03.08

11) ಸರ್ಕಾರದ ಆದೇಶ ಸಂ: ಸಿಐ 58 ಎಸ್‌ಜಿಎಫ್ 07(ಭಾ–2)(9) ದಿನಾಂಕ 21.05.2008

12) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ 13.06.2008.

13) ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 2007,(ಭಾ–2)(10) ದಿನಾಂಕ:30–06–2008.

14) ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 2007,(ಭಾ–2)(11) ದಿನಾಂಕ 24.11.2008.

15) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ,ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/ 13/2007–08 ದಿನಾಂಕ:18.12.2008.

16) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ಎಸ್‌ಟಿಟಿ/13/2006–07, ದಿನಾಂಕ:30–12–2008

17) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ಎಸ್‌ಟಿಟಿ/13/2007–08, ದಿನಾಂಕ 01.01.2009

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2) ರಿಂದ (6) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ 2006–07ನೇ ಸಾಲಿನ ಸಕ್ಕರೆ ವರ್ಷಕ್ಕೆ ಸಂಬಂಧಿಸಿದಂತೆ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ.3,62,18.916/– ರೈತರಿಗೆ ಪರಿಹಾರ ಧನ ರೂ. 25,00.00.000/– ಮತ್ತು ಕಾರ್ಖಾನೆಗಳಿಗೆ ಸಹಾಯಧನ 21,13,92.000/– ರೂಗಳು ಸೇರಿ ಒಟ್ಟು 49,76,10.916/–ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) (9) (10) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಕಬ್ಬು ಬೆಳೆದ ರೈತರಿಗೆ ಪರಿಹಾರ ನೀಡಲು ಕ್ರಮವಾಗಿ 7.00 ಕೋಟಿ ರೂಗಳು, 6.64 ಕೋಟಿ ರೂಗಳು ಮತ್ತು 1,25,11.000/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8) ರಲ್ಲಿರುವ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯ ನಂತರ ಅಂದರೆ ದಿನಾಂಕ: 01.06.07 ರಿಂದ 31.07.07ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ 8.75 ಕೋಟಿ ರೂಗಳ ಸಹಾಯಧನ ಬಿಡುಗಡೆಗೆ ಮಂಜೂರಾತಿ ನೀಡಲಾಗಿದ್ದು, ಅದರಂತೆ ಮೇಲೆ ಓದಲಾದ (10)ರಲ್ಲಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಟನ್ ಕಬ್ಬಿಗೆ ರೂ.100/–ನಂತೆ 8,74,92.000/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (11)ರಲ್ಲಿರುವ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನಂತರ ಅಂದರೆ 16.04.2007 ರಿಂದ 31.05.2007ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ ಕಬ್ಬಿಗೆ ರೂ.100/–ರಂತೆ ರೂ.10,00,00,000/–ಗಳ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (13) ರಲ್ಲಿರುವ ಆದೇಶದಲ್ಲಿ ಬಿಜಾಪುರ, ಮೈಸೂರು ಮತ್ತು ಬೆಳಗಾಂ ಜಿಲ್ಲೆಗಳ ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು 3.00 ಕೋಟಿ ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (14) ರಲ್ಲಿರುವ ಆದೇಶದಲ್ಲಿ ರೈತರಿಗೆ ಪರಿಹಾರ ಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು ರೂ. 3,03,73,203/– ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (15) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರದಲ್ಲಿ ಬಿಜಾಪುರ ಜಿಲ್ಲೆಯ ಬಿಜಾಪುರ, ಇಂಡಿ ಮತ್ತು ಸಿಂಧಗಿ ತಾಲ್ಲೂಕುಗಳಿಂದ ಮತ್ತು ಗುಲ್ಬರ್ಗಾ ಜಿಲ್ಲೆಯಿಂದ ನೆರೆಯ ಮಹಾರಾಷ್ಟ್ರ ರಾಜ್ಯದ ನಾಲ್ಕು ಸಕ್ಕರೆ ಕಾರ್ಖಾನೆಗಳಿಗೆ ರೈತರು ಕಬ್ಬು ಸರಬರಾಜು ಮಾಡಿದ್ದು, ಈ ಸಂಬಂಧ ಸಾಗಾಣಿಕೆ ಸಹಾಯಧನ 1,16,49,760/– ರೂ.ಗಳನ್ನು ಜಿಲ್ಲಾಧಿಕಾರಿ ಬಿಜಾಪುರ ಮತ್ತು 39,751/– ರೂ.ಗಳನ್ನು ಜಿಲ್ಲಾಧಿಕಾರಿ ಗುಲ್ಬರ್ಗಾ ಇವರುಗಳಿಗೆ ಬಿಡುಗಡೆ ಮಾಡಲು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (16)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ರೇಣುಕಾ ಶುಗರ್ಸ್ (ಲಿ), ಮನೋಳಿ ರವರಿಗೆ ದಿನಾಂಕ 16.04.2007ರಿಂದ 31.05.2007ರ ಅವಧಿಯಲ್ಲಿ 50 ಕಿ.ಮೀ. ಮೀರಿದ ದೂರದಿಂದ 44,143 ಟನ್ ಕಬ್ಬನ್ನು ರೈತರು ಸಾಗಾಣಿಕೆ ಮಾಡಿದ್ದು, ಈ ಸಂಬಂಧ 34,98,665/– ರೂ.ಗಳ ಸಾಗಾಣಿಕೆ ಸಹಾಯಧನವನ್ನು ರೈತರಿಗೆ ಪಾವತಿಸುವ ಸಲುವಾಗಿ ಜಿಲ್ಲಾಧಿಕಾರಿ ಬೆಳಗಾಂ ರವರಿಗೆ ಬಿಡುಗಡೆ ಮಾಡಲು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (17)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ, ಹಾಗೂ ಅಥಣಿ ತಾಲ್ಲೂಕಿನ ರೈತರು ಮಹಾರಾಷ್ಟ್ರ ರಾಜ್ಯದ ಜವಹಾರ್ ಶೇತಕಾರಿ ಸಹಕಾರಿ ಸಕ್ಕರೆ ಕಾರ್ಖಾನೆ, ಕೊಲ್ಹಾಪುರ ಜಿಲ್ಲೆ ಈ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ್ದು, ಈ ಸಂಬಂಧ ಸಾಗಾಣಿಕೆ ಸಹಾಯಧನ 23,90,459/– ರೂ.ಗಳನ್ನು ಕಾರ್ಖಾನೆಯು ಭರಿಸಿದ್ದು, ಈ ಹಣವನ್ನು ಕಾರ್ಖಾನೆಗೆ ಪಾವತಿಸುವ ಸಲುವಾಗಿ ಜಿಲ್ಲಾಧಿಕಾರಿ ಬೆಳಗಾವಿ ರವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (13)ರಲ್ಲಿರುವ ದಿನಾಂಕ 30.06.2008ರ ಆದೇಶದಲ್ಲಿ ಬಿಜಾಪುರ ಜಿಲ್ಲೆಗೆ 52,66,000/– ರೂ.ಗಳ ಸಾಗಾಣಿಕೆ ಸಹಾಯಧನವನ್ನು ಜಿಲ್ಲಾಧಿಕಾರಿ ಬಿಜಾಪುರ ಜಿಲ್ಲೆಗೆ ಬಿಡುಗಡೆ ಮಾಡಲಾಗಿದ್ದು, ಆದರೆ ಪ್ರಸ್ತಾವನೆಯಂತೆ ಬಿಡುಗಡೆ ಮಾಡಬೇಕಾಗಿದ್ದ ಮೊತ್ತವು 57,94,964/– ರೂ.ಗಳಾಗಿದ್ದು, ವ್ಯತ್ಯಾಸದ ಮೊತ್ತ 5,28,964/– ರೂ.ಗಳು ಬಿಡುಗಡೆಗೊಳಿಸಲು ಬಾಕಿ ಉಳಿದಿದ್ದು, ಈ ಬಾಕಿ ಹಣವನ್ನು ಈಗ ಬಿಡುಗಡೆಗೊಳಿಸಲು ಅನುಮೋದನೆಯಾಗಿದೆ.

ಮೇಲಿನಂತೆ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಗಳನ್ನು ಹಾಗೂ ಬಾಕಿ ಉಳಿದಿರುವ ಹಣದ ಬಿಡುಗಡೆಗೆ ಅನುಮೋದನೆಯಾಗಿರುವ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2) (12), ಬೆಂಗಳೂರು ದಿನಾಂಕ: 2ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ ರಾಜ್ಯದ ಬಿಜಾಪುರ, ಗುಲ್ಬರ್ಗಾ, ಬೆಳಗಾಂ ಜಿಲ್ಲೆಗಳಿಂದ ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಮತ್ತು ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಕಬ್ಬಿಗೆ ಪ್ರತಿ ಟನ್‌ಗೆ ಪ್ರತಿ ಕಿ.ಮೀ.ಗೆ ರೂ.2/–ರಂತೆ ಒಟ್ಟು 1,81,07,599/– ರೂ.ಗಳನ್ನು (ಒಂದು ಕೋಟಿ ಎಂಬತ್ತೊಂದು ಲಕ್ಷ ಏಳು ಸಾವಿರದ ಐನೂರ ತೊಂಬತ್ತೊಂಬತ್ತು ರೂಪಾಯಿಗಳು ಮಾತ್ರ) ರೈತರಿಗೆ ಮತ್ತು ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗೆ ಪಾವತಿಸುವ ಸಲುವಾಗಿ ಈ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

**ಸಾಗಾಣಿಕೆ ಸಹಾಯಧನ :**

| | | | |
|---|---|---|---|
| 1) ಬಿಜಾಪುರ ಜಿಲ್ಲೆಗೆ (ರೈತರಿಗೆ) * | : ರೂ. | 1,16,49,760–00 | ಜಿಲ್ಲಾಧಿಕಾರಿ ಬಿಜಾಪುರ |
| 2) ಗುಲ್ಬರ್ಗಾ ಜಿಲ್ಲೆಗೆ (ರೈತರಿಗೆ) * | **: ರೂ.** | **39,751–00** | ಜಿಲ್ಲಾಧಿಕಾರಿ ಗುಲ್ಬರ್ಗಾ |
| * (ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಕಬ್ಬಿಗೆ) | ರೂ. | 1,16,89,511–00 | |

3) ಬೆಳಗಾಂ ಜಿಲ್ಲೆಗೆ (ರೈತರಿಗೆ) : ರೂ. 34,98,665–00 ಜಿಲ್ಲಾಧಿಕಾರಿ ಬೆಳಗಾಂ
(ಶ್ರೀ ರೇಣುಕಾ ಶುಗರ್ಸ್, ಮನೋಳಿ ಕಾರ್ಖಾನೆಗೆ ರೈತರು ಸರಬರಾಜು ಮಾಡಿದ್ದಾರೆ)

4) ಬೆಳಗಾಂ ಜಿಲ್ಲೆಗೆ (ಕಾರ್ಖಾನೆಗೆ) : ರೂ. 23,90,459–00 ಜಿಲ್ಲಾಧಿಕಾರಿ ಬೆಳಗಾಂ
(ಮಹಾರಾಷ್ಟ್ರದ ರಾಜ್ಯದ ಜವಹಾರ್ ಶೇತಕಾರಿ ಸಹಕಾರಿ ಸಕ್ಕರೆ ಕಾರ್ಖಾನೆ, ಕೊಲ್ಹಾಪುರ ಜಿಲ್ಲೆ ಈ ಕಾರ್ಖಾನೆಗೆ ಪಾವತಿಸಬೇಕಾಗಿದೆ)

5) ಬಿಜಾಪುರ ಜಿಲ್ಲೆಗೆ (ರೈತರಿಗೆ) : ರೂ. 5,28,964–00 ಜಿಲ್ಲಾಧಿಕಾರಿ ಬಿಜಾಪುರ
(ಮಹಾರಾಷ್ಟ್ರ ರಾಜ್ಯದ ಮಹಾಂಕಾಳಿ ಸಕ್ಕರೆ ಕಾರ್ಖಾನೆಗೆ ರೈತರು ಸರಬರಾಜು ಮಾಡಿದ ಕಬ್ಬಿಗೆ ಸಾಗಾಣಿಕೆ ಸಹಾಯಧನದ ವ್ಯತ್ಯಾಸದ ಮೊತ್ತ ದಿನಾಂಕ 30.06.2008ರ ಆದೇಶದಲ್ಲಿ ರೂ. 5,28,964/– ಕಡಿಮೆ ಬಿಡುಗಡೆಯಾಗಿದೆ) ––––––––––––––––––

**ಒಟ್ಟು ರೂ. 1,81,07,599–00**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ)" ಸಹಾಯಧನ ಅಡಿಯಲ್ಲಿ 34.50 ಕೋಟಿ ರೂಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ 1,81,07,599/– ರೂ.ಗಳನ್ನು ರೈತರಿಗೆ/ಕಾರ್ಖಾನೆಗಳಿಗೆ ಸಾಗಾಣಿಕೆ ಸಹಾಯಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ: 13–06–2007 ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳಯನ್ವಯ ಪರಿಶೀಲಿಸಿ, ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾದಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 871 ವೆಚ್ಚ–1/2009 ದಿನಾಂಕ: 26.06.09 ರಂದು ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1682

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:** 1] ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2), ದಿನಾಂಕ:12.03.2008.

2] ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2) ದಿನಾಂಕ 13.06.2008.

3] ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2(2)) ದಿನಾಂಕ 28.08.2008.

4] ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2(3)) ದಿನಾಂಕ 16.12.2008.

5] ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (4) ದಿನಾಂಕ 02.01.2009.

6] ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (5) ದಿನಾಂಕ 19.01.2009.

7] ಆಯುಕ್ತರು ಕಬ್ಬು ಅಭಿವೃದ್ದಿರವರ ಪತ್ರಗಳು ದಿನಾಂಕ 03.12.2008, 16.12.2008, 27.12.2008, 12.01.2009, 13.01.2009, 09.02.2009, 11.02.2009, 13.02.2009, 16.02.2009, 18.02.2009, 19.02.2009, 03.03.2009, 04.03.2009, 11.03.2009 13.03.2009, 18.03.2009, 09.04.2009 ಮತ್ತು 20.04.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ:31–03–2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ

ಹಿನ್ನೆಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯಗಳನ್ನು ನೀಡಲಾಗುವುದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಆದೇಶದಲ್ಲಿ 2.00 ಕೋಟಿ ರೂ.ಗಳನ್ನು ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ಆದೇಶದಲ್ಲಿ 100.59 ಲಕ್ಷ ರೂ.ಗಳನ್ನು ಮೈಸೂರು ಪೇಪರ್ ಮಿಲ್ಸ್ ಲಿ., ರವರಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4)ರಲ್ಲಿರುವ ಆದೇಶದಲ್ಲಿ 6,.64,76,652/– ರೂ.ಗಳನ್ನು ನಂದಿ ಸ.ಸ.ಕಾರ್ಖಾನೆ ಮತ್ತು ದೂದ್ ಗಂಗಾ ಸ.ಸ.ಕಾ, ಈ ಎರಡು ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5)ರಲ್ಲಿರುವ ಆದೇಶದಲ್ಲಿ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 100/– ಗಳ ಸಹಾಯಧನ ಬಾಬ್ತು ಶೇ. 50ರಷ್ಟು 11,15,00,000/– ರೂ.ಗಳನ್ನು ಸಾಗಾಣಿಕೆ ಸಹಾಯಧನ 7,25,00,000/– ರೂ.ಗಳನ್ನು ಒಟ್ಟು ಸೇರಿ 18,40,00,000/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (6) ರಲ್ಲಿರುವ ಆದೇಶದಲ್ಲಿ 100/– ರೂ.ಗಳ ಸಹಾಯಧನ ಬಾಬ್ತು 4,90,05,135/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳಲ್ಲಿ ರಾಜ್ಯದ 22 ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಬ್ಬು ನುರಿಸಿದ್ದು, ಮತ್ತು 30 ಕಿ.ಮೀ ಗೆ ಮೀರಿದ ದೂರದಿಂದ ಕಬ್ಬು ಸಾಗಾಣಿಕೆ ಮಾಡಿಕೊಂಡಿದ್ದು ಹಾಗೂ ಸಕ್ಕರೆಯನ್ನು ರಫ್ತು ಮಾಡಲಾಗಿದ್ದು ಈ ಸಂಬಂಧ ದಿನಾಂಕ: 12–03–2008ರ ಸರ್ಕಾರದ ಆದೇಶದಂತೆ 21,51,93,493/– ರೂಗಳ ಸಹಾಯಧನ 3,63,34,794/–ರೂಗಳ ಸಾಗಾಣಿಕೆ ಸಹಾಯಧನ ಮತ್ತು 29,00,15,110/–ರೂಗಳ ರಫ್ತು ಸಹಾಯಧನವನ್ನು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008 (6), ಬೆಂಗಳೂರು, ದಿನಾಂಕ: 7ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2007–08ನೇ ಸಾಲಿನಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಕಾಣಿಸಿರುವ ರಾಜ್ಯದ ಸಕ್ಕರೆ ಕಾರ್ಖಾನೆಗಳು 30 ಕಿ.ಮೀ. ಹೊರಗಿನ ದೂರದಿಂದ ಸಾಗಾಣಿಕೆ ಮಾಡಿಕೊಂಡ ಕಬ್ಬಿಗೆ ಪ್ರತಿ ಟನ್‌ಗೆ ಪ್ರತಿ ಕಿ.ಮೀ.ಗೆ ರೂ. 2/–ರಂತೆ ಸಾಗಾಣಿಕೆ ಸಹಾಯಧನ ರೂ. 3,63,34,794/–ಗಳನ್ನು ಹಾಗೂ ಮೇಲೆ ಓದಲಾದ (5)ರ ದಿ. 02.01.2009ರ ಆದೇಶದಲ್ಲಿ ದಿ. ಗೋದಾವರಿ ಬಯೋ ರಿಫೈನರೀಸ್ ಲಿ., ರವರಿಗೆ 6,42,914/– ರೂ.ಗಳ ಸಾಗಾಣಿಕೆ ಸಹಾಯಧನ ಕಡಿಮೆ ಬಿಡುಗಡೆಗೊಳಿಸಲಾಗಿದ್ದು, ಈ ಬಾಕಿ ಮೊತ್ತವನ್ನು ಈಗ ಬಿಡುಗಡೆಗೊಳಿಸಲು ಅನುಮೋದನೆ ದೊರಕಿದ್ದು, ಈ ಹಣವು ಸೇರಿ ಒಟ್ಟು 3,69,77,708/– ರೂ.ಗಳನ್ನು (ಮೂರು ಕೋಟಿ, ಅರವತ್ತೊಂಬತ್ತು ಲಕ್ಷ, ಎಪ್ಪತ್ತೇಳು ಸಾವಿರದ ಏಳುನೂರ ಎಂಟು ರೂ.ಗಳು ಮಾತ್ರ) ಸಾಗಾಣಿಕೆ ಸಹಾಯಧನವಾಗಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಕಾಣಿಸಿರುವ 15 ಸಕ್ಕರೆ ಕಾರ್ಖಾನೆಗಳಿಗೆ ಹಾಗೂ ರೈತರಿಗೆ ನೀಡುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ **"2852–08–201–0–07 (ಯೋಜನೆ) "** ಸಹಾಯಧನ ಇದರಡಿಯಲ್ಲಿ 34.50 ಕೋಟಿ ರೂಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ 3,69,77,708/– ರೂ.ಗಳನ್ನು ಕಾರ್ಖಾನೆಗಳಿಗೆ/ರೈತರಿಗೆ ಸಾಗಾಣಿಕೆ ಸಹಾಯಧನವಾಗಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ 12–03–2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಂಬಂಧಿಸಿದ ಕಾರ್ಖಾನೆಗಳಿಗೆ/ರೈತರಿಗೆ ಬಿಡುಗಡೆ ಮಾಡಲು ಕ್ರಮ ವಹಿಸಿತಕ್ಕದ್ದು. ಕಾರ್ಖಾನೆಗಳು ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ, ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು, ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 871 ವೆಚ್ಚ–1/2009, ದಿನಾಂಕ:26–06–2009 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ(ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (6) ದಿನಾಂಕ 07.07.2009ಕ್ಕೆ ಸಂಬಂಧಿಸಿದ ಅನುಬಂಧ**

2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯಲ್ಲಿ 30 ಕಿ.ಮೀ.ಗಿಂತ ಮೀರಿದ ದೂರದಿಂದ ಸಾಗಾಣಿಕೆ ಮಾಡಿಕೊಂಡಿದ್ದ ಕಬ್ಬಿಗೆ ಸಾಗಾಣಿಕೆ ಸಹಾಯಧನ.

(ರೂ.ಗಳಲ್ಲಿ)

| ಕ್ರ. ಸಂ. | ಕಾರ್ಖಾನೆ ಹೆಸರು | ಸಾಗಾಣಿಕೆ ಸಹಾಯಧನ | ಜಿಲ್ಲಾಧಿಕಾರಿ/ಜಿಲ್ಲೆ | ಯಾರಿಗೆ ಪಾವತಿ (ಕಾರ್ಖಾನೆಗೆ/ರೈತರಿಗೆ) |
|---|---|---|---|---|
| 1 | ಅಂಬಿಕಾ ಶುಗರ್ಸ್ (ಲಿ) (ಶ್ರೀರಾಮ ಸ.ಸ.ಕಾ.ಯನ್ನು ಗುತ್ತಿಗೆ ಪಡೆದುಕೊಂಡಿದ್ದಾರೆ.) | 1,84,100 | ಜಿಲ್ಲಾಧಿಕಾರಿ, ಮೈಸುರು ಜಿಲ್ಲೆ | ಕಾರ್ಖಾನೆಗೆ |
| 2 | ವೆಂಕಟೇಶ್ವರ ಪವರ್ ಪ್ರಾಜೆಕ್ಟ್ | 41,05,085 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ಕಾರ್ಖಾನೆಗೆ |
| 3 | ಉಗಾರ್ ಶುಗರ್ಸ್ (ಲಿ) | 63,74,162 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ಕಾರ್ಖಾನೆಗೆ |
| 4 | ನಿರಾಣಿ ಶುಗರ್ಸ್ (ಲಿ) | 11,24,960 | ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ | ಕಾರ್ಖಾನೆಗೆ |
| 5 | ಜಮಖಂಡಿ ಶುಗರ್ಸ್ (ಲಿ) | 25,68,589 | ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ | ಕಾರ್ಖಾನೆಗೆ |
| 6 | ಅಥಣಿ ಫಾರ್ಮರ್ಸ್ ಶುಗರ್ಸ್ (ಲಿ) | 24,17,481<br>19,08,434 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ರೈತರಿಗೆ<br>ಕಾರ್ಖಾನೆಗೆ |
| 7 | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ | 20,420<br>9,41,212 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ರೈತರಿಗೆ<br>ಕಾರ್ಖಾನೆಗೆ |
| 8 | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ಜಿ.ಎಂ.ಆರ್. ಶುಗರ್ಸ್ ಅಂಡ್ ಎನರ್ಜಿ ರವರು ಗುತ್ತಿಗೆ ಪಡೆದಿದ್ದಾರೆ) | 15,08,568 | ಜಿಲ್ಲಾಧಿಕಾರಿ, ಹಾವೇರಿ ಜಿಲ್ಲೆ | ರೈತರಿಗೆ |
| 9 | ಜೆಮ್ ಶುಗರ್ಸ್ (ಲಿ) | 55,18,974 | ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ | ಕಾರ್ಖಾನೆಗೆ |
| 10 | ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ | 12,02,455<br>9,84,982 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ರೈತರಿಗೆ<br>ಕಾರ್ಖಾನೆಗೆ |
| 11 | ಬನ್ನಾರಿ ಅಮ್ಮನ್ ಶುಗರ್ಸ್ | 2,72,854 | ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ | ಕಾರ್ಖಾನೆಗೆ |
| 12 | ಹಾಲಸಿದ್ದನಾಥ ಸಹಕಾರಿ ಸಕ್ಕರೆ ಕಾರ್ಖಾನೆ | 60,286<br>1,22,915 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ರೈತರಿಗೆ<br>ಕಾರ್ಖಾನೆಗೆ |
| 13 | ಪ್ರಭುಲಿಂಗೇಶ್ವರ ಶುಗರ್ಸ್ | 22,71,236<br>40,18,319 | ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ | ರೈತರಿಗೆ<br>ಕಾರ್ಖಾನೆಗೆ |
| 14 | ವಿಶ್ವನಾಥ ಶುಗರ್ಸ್ (ಲಿ) | 84,700<br>6,45,062 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ರೈತರಿಗೆ<br>ಕಾರ್ಖಾನೆಗೆ |
| 15 | ದಿನಾಂಕ 02.01.2009ರ ಆದೇಶದಲ್ಲಿ ದಿ. ಗೋದಾವರಿ ಬಯೋ ರಿಫೈನರೀಸ್ ಲಿ., ಈ ಕಾರ್ಖಾನೆಗೆ ಬಿಡುಗಡೆಗೆ ಬಾಕಿ ಉಳಿದಿದ್ದ ಹಣ | 6,42,914 | ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ | ಕಾರ್ಖಾನೆಗೆ |
| | ಒಟ್ಟು | **3,69,77,708** | | |

**ಪಿ. ಆನಂದ್‌ಕುಮಾರ್**

ಪಿ.ಆರ್. 1683 ಪೀಠಾಧಿಕಾರಿ(ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಶ್ರೀ ಜೆ. ಶಿವಲಿಂಗಯ್ಯ, ರೇಷ್ಮೆ ಪ್ರದರ್ಶಕರು ಇವರ ಮೇಲ್ಮನವಿಯ ಬಗ್ಗೆ.

**ಓದಲಾಗಿದೆ:** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂಖ್ಯೆ:ಸಿಬ್ಬಂದಿ/ಶಿಸ್ತು/ಡಿಸಿಬಿ/4ಬಿ/94–95, ದಿನಾಂಕ: 8–1–1999.

2. ಶ್ರೀ ಜೆ. ಶಿವಲಿಂಗಯ್ಯ, ರೇಷ್ಮೆ ಪ್ರದರ್ಶಕರು, ಮೇಲ್ವಿಚಾರಣಾ ದಳ, ಬೆಂಗಳೂರು ಇವರ ಮೇಲ್ಮನವಿ ಪತ್ರ ದಿನಾಂಕ: 31–7–2008.

3. ಈ ಇಲಾಖೆಯ ಇದೇ ಸಂಖ್ಯೆಯ ದಿನಾಂಕ: 24–10–2008ರ ಪತ್ರ.

4. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ/3ಎ/ಶಿಸ್ತು/17/2008–09, ದಿನಾಂಕ: 21–1–2009.

**ಪ್ರಸ್ತಾವನೆ:**

ಶ್ರೀ ಜೆ. ಶಿವಲಿಂಗಯ್ಯ, ರೇಷ್ಮೆ ಪ್ರದರ್ಶಕರು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಿ, ಮೇಲೆ ಓದಲಾದ ಕ್ರಮಸಂಖ್ಯೆ(1)ರ ಆದೇಶದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಇವರು ಸರ್ಕಾರಕ್ಕೆ ಬರಬೇಕಾದ ಬಾಕಿ ಹಣ ರೂ. 93,328.30 ಗಳನ್ನು ಇವರ ಮಾಸಿಕ ವೇತನದಿಂದ ರೂ. 2500/– ರಂತೆ ಜನವರಿ–1999 ರಿಂದ ಪ್ರಾರಂಭಗೊಂಡು ಪೂರ್ಣ ಹಣ ಸರ್ಕಾರಕ್ಕೆ ಸಂದಾಯವಾಗುವ ತನಕ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡಲು ಹಾಗೂ ನೌಕರರ 1 ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯಲು ಆದೇಶ ಹೊರಡಿಸಿರುತ್ತಾರೆ. ಸದರಿ ದಂಡನೆ ಆದೇಶದ ವಿರುದ್ಧ ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ದಿನಾಂಕ: 31–7–2008ರ ಪತ್ರದಲ್ಲಿ ದಂಡಿತ ನೌಕರರು ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿ, ತಾನು ಕೆ.ಎಂ. ದೊಡ್ಡಿ, ತಾಂತ್ರಿಕ ಸೇವಾ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರೇಷ್ಮೆ ಚಾಕಾಣಿಕೆ ಹುಳುಗಳನ್ನು ಹೆಚ್ಚು ಹೆಚ್ಚಾಗಿ ರೈತಾಪಿ ವರ್ಗದವರಿಗೆ ಪ್ರಸರಿಸಲು ಬಿತ್ತನೆಕೋಠಿಗಳಿಂದ ಮೊಟ್ಟೆಗಳನ್ನು ಪಡೆದು ವಿತರಿಸಿರುವುದಾಗಿ ಅವುಗಳಲ್ಲಿ ಹೆಚ್ಚಿನವು ಚಾಕಿಯಾಗದೇ ಬೆಳೆ ನಷ್ಟ ಉಂಟಾಗಿದ್ದು, ರೈತರಿಗೂ ನಷ್ಟ ಉಂಟಾಗಿರುವುದರಿಂದ ಮೊಟ್ಟೆಗಳ ಹಣವನ್ನು ನೀಡಿರುವುದಿಲ್ಲ. ಮೊಟ್ಟೆಗಳನ್ನು ಸ್ವೀಕೃತಿ ನೀಡಿ ತಾನು ಪಡೆದಿದ್ದರಿಂದ ಇಲಾಖೆಯು ಹಣವನ್ನು ತಾನು ದುರುಪಯೋಗ ಪಡಿಸಿಕೊಂಡಿರುವನೆಂದು ಆರೋಪಿಸಿ, ಇಲಾಖಾ ವಿಚಾರಣೆ ನಡೆಸಿ ಮಾಸಿಕ ರೂ. 2500/–ಗಳನ್ನು ವಸೂಲು ಮಾಡಲು ಹಾಗೂ ಒಂದು ವಾರ್ಷಿಕ ವೇತನ ಮುಂಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯಲು ದಂಡನೆ ಆದೇಶ ವಿಧಿಸಿರುತ್ತದೆ. ಇದರಿಂದ ತನಗೆ ನಷ್ಟ ಉಂಟಾಗಿದ್ದು, ಅನ್ಯಾಯವಾಗಿರುತ್ತದೆ. ಇಲಾಖೆಯು ಇಂತಹುದೇ ಪ್ರಕರಣಗಳಲ್ಲಿ ಕೆಲವರಿಗೆ ದಂಡನೆ ವಿಧಿಸಿರುವುದಿಲ್ಲ. ಆದರೆ ತನಗೆ ದಂಡನೆ ವಿಧಿಸಿರುತ್ತದೆ. ಮೊಟ್ಟೆಗಳನ್ನು ತಾನು ರೈತರಿಗೆ ನೀಡಿದ್ದು, ಅವರಿಂದ ಹಣ ಬಂದಿರುವುದಿಲ್ಲ. ಆದಾಗ್ಯೂ ವಸೂಲಾತಿಯನ್ನು ತನ್ನಿಂದ ಮಾಡಲಾಗಿದೆ. ತನಗೆ ವಿಧಿಸಿರುವ ದಂಡನೆಯು ತೀರಾ ಭಾರಿಯಾದ್ದರಿಂದ ತನ್ನ ವೇತನದಿಂದ ಒಂದು ವೇತನ ಮುಂಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ಕಡಿತಗೊಳಿಸಿರುವುದನ್ನು ಮಾರ್ಪಡಿಸಿ ವೇತನ ಮುಂಬಡ್ತಿ ಕಡಿತವನ್ನು ಸಂಚಿತ ರಹಿತ ಪರಿಣಾಮ ಬೀರುವಂತೆ ಮಾರ್ಪಡಿಸುವಂತೆ ಕೋರಿರುತ್ತಾರೆ.

ನೌಕರರು ಸಲ್ಲಿಸಿದ್ದ ಮೇಲ್ಮನವಿಗೆ ಕುರಿತಂತೆ ಪರಿಶೀಲಿಸಿ, ಮನವಿಯಲ್ಲಿ ಹೇಳಿರುವ ಅಂಶಕ್ಕೆ ಕುರಿತಂತೆ ಇಲಾಖೆಯ ಅಭಿಪ್ರಾಯವನ್ನು ಒದಗಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಇಲಾಖೆಯನ್ನು ಕೋರಲಾಯಿತು. ಈ ನೌಕರರ ಮೇಲ್ಮನವಿಗೆ ಕುರಿತಂತೆ ಇಲಾಖೆಯು ಇವರ ಮೇಲಿನ ದೋಷಾರೋಪಣೆಗಳ ಕುರಿತಂತೆ ವಿವರಿಸಿ, ನೌಕರರ ವಿರುದ್ಧದ ಎಲ್ಲಾ 7 ಆರೋಪಗಳು ಸಾಬೀತಾಗಿದ್ದ ಹಿನ್ನಲೆಯಲ್ಲಿ ದಂಡನೆಯನ್ನು ವಿಧಿಸಿರುವುದಾಗಿ ನೌಕರರು ಇಲಾಖೆಯ ವಿವಿಧ 7 ಬಿತ್ತನೆಕೋಠಿಗಳಲ್ಲಿ ಒಟ್ಟು ರೂ. 93328/– ಗಳಷ್ಟು ಮೊತ್ತದ ರೇಷ್ಮೆ ಮೊಟ್ಟೆಯ ಹಣವನ್ನು ಸಕಾಲದಲ್ಲಿ ಸರ್ಕಾರಕ್ಕೆ ಸಂದಾಯಿಸದೇ ದುರುಪಯೋಗ ಪಡಿಸಿಕೊಂಡು ದುರ್ನಡತೆ ಎಸಗಿ ನಿಯಮ ಉಲ್ಲಂಘಿಸಿರುವುದರಿಂದ ಅವರ ವಿರುದ್ಧ ಶಿಸ್ತು ಕ್ರಮ ಕೈಗೊಂಡಿದ್ದು ಸಮರ್ಪಕವಾಗಿರುವುದರಿಂದ ಕೈಗೊಂಡಿರುವ ಕ್ರಮವನ್ನು ಸ್ಥಿರೀಕರಿಸುವಂತೆ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತದೆ.

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ನಿಯಮ 20 ರಲ್ಲಿ ಈ ನೌಕರರಿಗೆ ದಂಡನೆ ವಿಧಿಸಿದ ಮೂರು ತಿಂಗಳೊಳಗಾಗಿ ಸದರಿ ದಂಡನಾ ಆದೇಶದ ವಿರುದ್ಧ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಲು 3 ತಿಂಗಳ ಕಾಲಾವಕಾಶವಿದ್ದು, ಅದರಂತೆ ದಂಡಿತ ನೌಕರರು 3 ತಿಂಗಳೊಳಗಾಗಿ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುವುದು ಕಂಡುಬರುತ್ತಿಲ್ಲ. ನೌಕರರು ಜೂನ್–1999 ರಲ್ಲಿ ಮೇಲ್ಮನವಿ ಸಲ್ಲಿಸಿರುವುದಾಗಿ ಹೇಳಿದ್ದು, ಈ ಬಗ್ಗೆ ಯಾವುದೇ ದಾಖಲಾತಿಗಳು ಲಭ್ಯವಿರುವುದಿಲ್ಲ. ಹಾಗೂ ಮೇಲ್ಮನವಿ ಸಲ್ಲಿಸಿರುವುದಕ್ಕೆ ಯಾವುದೇ ದಾಖಲಾತಿಗಳನ್ನು ಸಹ ಒದಗಿಸಿರುವುದಿಲ್ಲ. ಇವರು ಜೂನ್–1999 ರಲ್ಲಿಯೇ ಮೇಲ್ಮನವಿ ಸಲ್ಲಿಸಿದ್ದಾಗಲೂ ಮೇಲ್ಮನವಿಗೆ ಕಾಲಮಿತಿ ಮೀರಿರುತ್ತದೆ. ವಾಸ್ತವವಾಗಿ ದಂಡನೆ ವಿಧಿಸಿದ

3 ತಿಂಗಳೊಳಗಾಗಿ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿ ಸಲ್ಲಿಸಬೇಕಾಗಿದ್ದು, ನಿಯಮಾನುಸಾರ ನಿಗದಿತ ಅವಧಿಯೊಳಗೆ ಮೇಲ್ಮನವಿ ಸಲ್ಲಿಸದೇ ಇರುವುದರಿಂದ ಇವರು ಸಲ್ಲಿಸಿರುವ ಮೇಲ್ಮನವಿಯನ್ನು ಪರಿಗಣಿಸಲು ಅವಕಾಶವಿರುವುದಿಲ್ಲವಾದ್ದರಿಂದ ಇವರ ಮೇಲ್ಮನವಿಯನ್ನು ತಿರಸ್ಕರಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 116 ರೇಇವಿ 2008, ಬೆಂಗಳೂರು, ದಿನಾಂಕ: 15ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ದಂಡಿತ ನೌಕರರಾದ ಶ್ರೀ ಜೆ. ಶಿವಲಿಂಗಯ್ಯ, ರೇಷ್ಮೆ ಪ್ರದರ್ಶಕರು ಇವರು ನಿಗದಿತ ಅವಧಿಯಲ್ಲಿ ಮೇಲ್ಮನವಿ ಸಲ್ಲಿಸದೇ ವಿಳಂಬವಾಗಿ ಸಲ್ಲಿಸಿರುವ ಮೇಲ್ಮನವಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 25 ರನ್ವಯ ತಿರಸ್ಕರಿಸಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು ದಂಡನೆ ವಿಧಿಸಿ ಹೊರಡಿಸಿರುವ ಆದೇಶ ಸಂಖ್ಯೆ: ಸಿಬ್ಬಂದಿ/ಶಿಸ್ತು/ಡಿಸಿಬಿ/4ಬಿ/94–95, ದಿನಾಂಕ: 8–1–1999ರ ಆದೇಶವನ್ನು ಸ್ಥಿರೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1580

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ(ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಶ್ರೀ ಎಲ್.ಎಂ. ಮಂಜುನಾಥ್, ರೇಷ್ಮೆ ಪ್ರವರ್ತಕರು ಇವರ ಪರೀಕ್ಷಾರ್ಥ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ1(5)/ಪಪೂಅ/ವಿಸ್ತರಣೆ/88/06–07, ದಿನಾಂಕ: 26–3–2007 ಮತ್ತು 26–2–2009.

2. ಸರ್ಕಾರದ ಆದೇಶ ಸಂಖ್ಯೆ: ವಾಕೈ 57 ರೇಇವಿ 2007, ದಿನಾಂಕ: 21–5–2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ(1)ರ ದಿನಾಂಕ: 26–3–2007 ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರು ಶ್ರೀ ಎಲ್.ಎಂ. ಮಂಜುನಾಥ್, ರೇಷ್ಮೆ ಪ್ರವರ್ತಕರು, ಇವರ ಪರಿವೀಕ್ಷಣಾ ಅವಧಿಯನ್ನು ದಿ: 19–6–2007 ರಿಂದ 18–6–2008ರವರೆಗೆ ವಿಸ್ತರಿಸಿ ಆದೇಶಿಸುವಂತೆ ಕೋರಿದ್ದರ ಮೇರೆಗೆ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಶ್ರೀ ಎಲ್.ಎಂ. ಮಂಜುನಾಥ್, ರೇಷ್ಮೆ ಪ್ರವರ್ತಕರು, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಕೆಂಪನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 19–6–2007 ರಿಂದ 18–6–2008 ರವರೆಗೆ 1977 ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳ ನಿಯಮ 4(1)(i) ರನ್ವಯ ವಿಸ್ತರಿಸಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ: 26–2–2009ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೌಕರರು ತಮ್ಮ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ದಿ: 2–8–2007 ರಂದು ಪಾಸು ಮಾಡಿಕೊಂಡಿರುವುದರಿಂದ ದಿನಾಂಕ:2–8–2007 ರಿಂದ ನೌಕರರ ಪರಿವೀಕ್ಷಣಾ ಅವಧಿಯನ್ನು ಘೋಷಿಸಬೇಕಾಗಿರುತ್ತದೆ. ಎಂದು ತಿಳಿಸಿ ಉಲ್ಲೇಖ(2)ರ ಆದೇಶದಲ್ಲಿ ಈಗಾಗಲೇ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಆದೇಶಿಸಿರುವುದನ್ನು ಮಾರ್ಪಡಿಸಿ, ದಿನಾಂಕ: 18–6–2008ರ ಬದಲಾಗಿ 2–8–2007ರವರೆಗೆ ವಿಸ್ತರಿಸಿ ಪರಿಷ್ಕೃತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅವರು ಕೋರಿರುವಂತೆ ನೌಕರರ ಪರಿವೀಕ್ಷಣಾ ಅವಧಿಯನ್ನು ಅವರು ಇಲಾಖಾ ಪರೀಕ್ಷೆ ಪಾಸು ಮಾಡಿಕೊಂಡ ದಿನಾಂಕದವರೆಗೆ ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 77 ರೇಇವಿ 2009, ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಆದೇಶದಲ್ಲಿ ಶ್ರೀ ಎಲ್.ಎಂ. ಮಂಜುನಾಥ್, ರೇಷ್ಮೆ ಪ್ರವರ್ತಕರು, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಕೆಂಪನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 19–6–2007 ರಿಂದ 18–6–2008ರವರೆಗೆ ವಿಸ್ತರಿಸಿ, ಆದೇಶಿಸಿರುವುದನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(2) ರನ್ವಯ ದಿನಾಂಕ: 19–6–2007 ರಿಂದ 2–8–2007 ರವರೆಗೆ ಮಾರ್ಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1581

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ(ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಆದೇಶ ಸಂಖ್ಯೆ: ಕಂಇ/34/ಎಲ್‌ಜೆಎಂ/71, ದಿ: 5–1–1972 ರಲ್ಲಿ ಕಂದಾಯ ಇಲಾಖೆಯಿಂದ ರೇಷ್ಮೆ ಇಲಾಖೆಗೆ ವರ್ಗಾಯಿಸಿದ್ದ 206.25 ಎಕರೆ ಜಮೀನಿನಲ್ಲಿ 166.25 ಎಕರೆ ಜಮೀನನ್ನು ಕಂದಾಯ ಇಲಾಖೆಗೆ ವಾಪಸ್ಸು ನೀಡುವ ಬಗ್ಗೆ.

**ಓದಲಾಗಿದೆ:** 1. ಕಂದಾಯ ಇಲಾಖೆಯ ಕಡತ ಸಂಖ್ಯೆ: ಆರ್‌ಡಿ 39 ಎಲ್‌ಜಿಎಂ 2007.

2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರಿಗೆ ಬರೆದ ಈ ಇಲಾಖೆಯ ಇದೇ ಸಂಖ್ಯೆಯ ದಿನಾಂಕ:8–4–209ರ ಪತ್ರ.

3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಎಸ್‌ಪಿಎಸ್‌ಎಫ್/ಧರ್ಮಾ/ ಜಮೀನು /31/2009–10, ದಿನಾಂಕ: 11–5–2009.

**ಪ್ರಸ್ತಾವನೆ:**

ಕುಪ್ಪೆಕೊಳಘಟ್ಟ ಗ್ರಾಮದಲ್ಲಿ ವಾರ್‌ಫಾರ್ ರೇಂಜ್‌ಗಾಗಿ ರಕ್ಷಣಾ ಇಲಾಖೆಗೆ ಜಮೀನು ಕಳೆದುಕೊಂಡವರು ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ನ್ಯಾಯಾಲಯದ ಆದೇಶದನ್ವಯ ಜಮೀನು ಕಳೆದುಕೊಂಡ 21 ಮಂದಿಗೆ ತಲಾ 3 ಎಕರೆಯಂತೆ ಜಮೀನು ಮಂಜೂರು ಮಾಡುವ ವಿಷಯವನ್ನು ಕಂದಾಯ ಇಲಾಖೆಯು ಪರಿಶೀಲಿಸಿ ಅದರಂತೆ ಜಮೀನು ಮಂಜೂರು ಮಾಡಲು ತೀರ್ಮಾನಿಸಿರುವುದಾಗಿ, ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 34 ಎಲ್‌ಜೆಎಂ 71, ದಿ: 5–1–72 ರಲ್ಲಿ ಕಂದಾಯ ಇಲಾಖೆಯ 206.25 ಎಕರೆ ಜಮೀನನ್ನು ರೇಷ್ಮೆ ಇಲಾಖೆಗೆ ವರ್ಗಾಯಿಸಿದ್ದು, ಸದರಿ ಜಮೀನನ್ನು ರೇಷ್ಮೆ ಇಲಾಖೆಯು ಬಳಸದೇ ಇರುವುದರಿಂದ 141.25 ಎಕರೆ ಜಮೀನನ್ನು ರೇಷ್ಮೆ ಇಲಾಖೆಯಿಂದ ಹಿಂದಕ್ಕೆ ಪಡೆದು ಜಮೀನು ಕಳೆದುಕೊಂಡವರಿಗೆ ಮಂಜೂರು ಮಾಡಬೇಕಾಗಿದೆಯಾದ್ದರಿಂದ ರೇಷ್ಮೆ ಇಲಾಖೆಗೆ ಮಂಜೂರು ಮಾಡಲಾಗಿದ್ದ ಜಮೀನಿನಲ್ಲಿ141.25 ಎಕರೆ ಜಮೀನನ್ನು ಕಂದಾಯ ಇಲಾಖೆಗೆ ವಾಪಸ್ಸು ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಕಡತದಲ್ಲಿ ಕಂದಾಯ ಇಲಾಖೆಯು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯನ್ನು ಕೋರಿರುತ್ತದೆ. ಸದರಿ ವಿಷಯವನ್ನು ಪರಿಶೀಲಿಸಿ, ಕಂದಾಯ ಇಲಾಖೆಯು ನ್ಯಾಯಾಲಯದ ಆದೇಶವನ್ನು ಜಾರಿಗೊಳಿಸುವುದಕ್ಕಾಗಿ ರೇಷ್ಮೆ ಇಲಾಖೆಗೆ ನೀಡಿದ್ದ ಜಮೀನಿನಲ್ಲಿ ಬಳಕೆಯಾಗದೇ ಉಳಿದಿರುವ 141.25 ಎಕರೆ ಜಮೀನನ್ನು ಹಿಂದಕ್ಕೆ ಪಡೆಯಲು ತೀರ್ಮಾನಿಸಿ ಜಮೀನನ್ನು ಕಂದಾಯ ಇಲಾಖೆಗೆ ವಾಪಸ್ಸು ನೀಡುವಂತೆ ಕೋರಿರುವುದರಿಂದ ಕಂದಾಯ ಇಲಾಖೆಯು ಕೋರಿರುವಂತೆ ರೇಷ್ಮೆ ಇಲಾಖೆಯ ಜಮೀನನ್ನು ಕಂದಾಯ ಇಲಾಖೆಗೆ ನೀಡುವುದಕ್ಕೆ ಕುರಿತಂತೆ ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಅಭಿಪ್ರಾಯ/ಸಹಮತಿ ಕೋರಲಾಯಿತು. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಹುಣಸೂರು ತಾಲ್ಲೂಕು, ಬಿಳಿಕೆರೆ ಹೋಬಳಿ ಕುಪ್ಪೆಕೊಳಘಟ್ಟ ಗ್ರಾಮದ ಸರ್ವೆ ನಂ. 155ರ ಜಮೀನು ಧರ್ಮಾಪುರ ರೇಷ್ಮೆ ಕೃಷಿ ಕ್ಷೇತ್ರದ ಜಮೀನಾಗಿದ್ದು, ಈ ಕ್ಷೇತ್ರದ 166.25 ಎಕರೆ ಜಮೀನನ್ನು ಸಂಪೂರ್ಣವಾಗಿ ಇದನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸಹಮತಿ ನೀಡಿದ್ದು, ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿ ಕಂದಾಯ ಇಲಾಖೆಯು ಕೋರಿರುವಂತೆ ಹಾಗೂ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಜಮೀನನ್ನು ಕಂದಾಯ ಇಲಾಖೆಗೆ ವಾಪಸ್ಸು ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 13 ರೇಯೋವಿ 2009, ಬೆಂಗಳೂರು, ದಿನಾಂಕ: 11ನೇ ಜುನ್ 2009**

ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 34 ಎಲ್‌ಜೆಎಂ 71, ದಿ: 5–1–72 ರಲ್ಲಿ ಕಂದಾಯ ಇಲಾಖೆಯಿಂದ ರೇಷ್ಮೆ ಇಲಾಖೆಗೆ ವರ್ಗಾಯಿಸಿದ್ದ ಹುಣಸೂರು ತಾಲ್ಲೂಕು ಬಿಳಿಕೆರೆ ಹೋಬಳಿ, ಧರ್ಮಾಪುರ ಗ್ರಾಮಕ್ಕೆ ಸೇರಿದ ಸರ್ವೆ ನಂ. 155ರ ಜಮೀನಿನಲ್ಲಿ ರೇಷ್ಮೆ ಇಲಾಖೆಯು ಬಳಸದೇ ಇರುವ 166.25 ಎಕರೆ ಜಮೀನನ್ನು ಸಂಪೂರ್ಣವಾಗಿ ಕಂದಾಯ ಇಲಾಖೆಗೆ ವಾಪಸ್ಸು ನೀಡಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1582

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ(ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಶಿವಮೊಗ್ಗದ ರೇಷ್ಮೆಗೂಡು ಮಾರುಕಟ್ಟೆ ಕಟ್ಟಡವನ್ನು ಕೈಗಾರಿಕೆ ಇಲಾಖೆಯ ಕಛೇರಿಗಳಿಗೆ ನೀಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇನಿ/ಗೂಮಾ/ಶಿಮೊ/ 60/2008–09, ದಿನಾಂಕ: 16–1–2009.

**ಪ್ರಸ್ತಾವನೆ:**

ಶಿವಮೊಗ್ಗ ನಗರದಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಬಿ.ಹೆಚ್. ರಸ್ತೆ ಒತ್ತುವರಿ ತೆರವು ಹಾಗೂ ರಸ್ತೆ ಅಗಲೀಕರಣ ಕಾರ್ಯ ಕೈಗೊಳ್ಳಲಾಗಿದ್ದು, ಶಿವಮೊಗ್ಗ ನಗರಸಭೆಗೆ ಸೇರಿದ ಹಳೆಯ ಶಿವಪ್ಪನಾಯಕ ಮಾರುಕಟ್ಟೆಯನ್ನು ಕೆಡವಲಾಗಿದ್ದು, ಸದರಿ

ಸ್ಥಳದಲ್ಲಿ ವಾಣಿಜ್ಯ ಸಂಕೀರ್ಣವನ್ನು ನಿರ್ಮಿಸುವುದಕ್ಕೆ ನಿರ್ಧರಿಸಿದ್ದು, ಆ ಜಾಗಕ್ಕೆ ಹೊಂದಿಕೊಂಡಿರುವ ಜಿಲ್ಲಾ ಕೈಗಾರಿಕಾ ಕೇಂದ್ರದ ಕಛೇರಿ ಜಾಗವನ್ನು ಸಹ ಸದರಿ ಸಂಕೀರ್ಣ ನಿರ್ಮಾಣಕ್ಕೆ ಬಳಸಿಕೊಳ್ಳಲು ತೀರ್ಮಾನಿಸಿರುವುದರಿಂದ ಅಲ್ಲಿರುವ ಸರ್ಕಾರಿ ಕಛೇರಿಗಳನ್ನು ಸ್ಥಳಾಂತರಿಸಬೇಕಾಗಿರುವ ಹಿನ್ನಲೆಯಲ್ಲಿ ತೆರವು ಮಾಡಿಸಲಿರುವ ಜಿಲ್ಲಾ ಕೈಗಾರಿಕಾ ಕೇಂದ್ರದ ಕಛೇರಿಗಳನ್ನು 100 ಅಡಿ ರಸ್ತೆ ರಾಜೇಂದ್ರನಗರ ಹಾಗೂ ಸಾಗರ ರಸ್ತೆಗಳಲ್ಲಿರುವ ರೇಷ್ಮೆ ಇಲಾಖೆಗೆ ಸೇರಿದ ರೇಷ್ಮೆಗೂಡು ಮಾರುಕಟ್ಟೆ ಕಟ್ಟಡ ಹಾಗೂ ಇತರ ಕಟ್ಟಡಗಳನ್ನು ಗುರುತಿಸಿ, ಈ ಕಟ್ಟಡಗಳ ನವೀಕರಣ ಮತ್ತು ದುರಸ್ತಿ ಕಾರ್ಯಗಳನ್ನು ಇಲ್ಲಿಗೆ ಸ್ಥಳಾಂತರಿಸುವ ಇಲಾಖೆಗಳಿಂದ ಹಾಗೂ ನಗರಸಭೆಯ ವತಿಯಿಂದ ಕೈಗೊಳ್ಳುವುದಾಗಿ ಉದ್ದೇಶಿತ ಬೃಹತ್ ಸಂಕೀರ್ಣವು ಪೂರ್ಣವಾದ ನಂತರ ರೇಷ್ಮೆ ಇಲಾಖೆಯ ಕಟ್ಟಡಗಳನ್ನು ವಾಪಸ್ಸು ಬಿಟ್ಟುಕೊಡುವುದಾಗಿ ಅಲ್ಲಿಯವರೆಗೆ ರೇಷ್ಮೆ ಇಲಾಖೆಯ ಸದರಿ ಕಟ್ಟಡಗಳನ್ನು ಬಿಟ್ಟುಕೊಡುವಂತೆ ಶಿವಮೊಗ್ಗ ಜಿಲ್ಲಾಧಿಕಾರಿಗಳು ಕೋರಿರುವುದಾಗಿ ಮೇಲೆ ಓದಲಾದ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ತಿಳಿಸಿ, ಹಾಲಿ ರೇಷ್ಮೆಗೂಡು ಮಾರುಕಟ್ಟೆಯಲ್ಲಿ 2 ವರ್ಷಗಳಿಂದ ವಹಿವಾಟು ನಡೆಯುತ್ತಿಲ್ಲವಾದ್ದರಿಂದ ಮತ್ತು ಸದರಿ ಇಲಾಖಾ ಕಟ್ಟಡಗಳು ಶಿಥಿಲಾವಸ್ಥೆಯಲ್ಲಿದ್ದು ಇವುಗಳ ದುರಸ್ತಿ ಹಾಗೂ ನವೀಕರಣ ಕಾರ್ಯವನ್ನು ಸ್ಥಳಾಂತರವಾಗಲಿರುವ ಇಲಾಖೆಗಳೇ ಕೈಗೊಳ್ಳುವುದಾಗಿ ತಿಳಿಸಿರುವುದರಿಂದ ಶಿವಮೊಗ್ಗ ನಗರದ ಬಿ.ಹೆಚ್. ರಸ್ತೆಯ ಅಗಲೀಕರಣದ ಹಿನ್ನಲೆಯಲ್ಲಿ ಅಲ್ಲಿರುವಂತಹ ಜಿಲ್ಲಾಕೈಗಾರಿಕಾ ಕೇಂದ್ರದ ಕಛೇರಿಗಳನ್ನು ಸ್ಥಳಾಂತರಿಸುವುದಕ್ಕೆ ರೇಷ್ಮೆ ಇಲಾಖೆಗೆ ಸೇರಿದ ಕಟ್ಟಡಗಳನ್ನು ನೀಡಬಹುದಾಗಿದೆ ಎಂದು ತಿಳಿಸಿ, ಈ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ಶಿವಮೊಗ್ಗದ ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆಯ ಕಟ್ಟಡವನ್ನು ಕೈಗಾರಿಕಾ ಇಲಾಖೆಯ ಕಛೇರಿಗಳಿಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 7 ರೇಯೋವಿ 2009, ಬೆಂಗಳೂರು, ದಿನಾಂಕ: 11ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶಿವಮೊಗ್ಗದ ರೇಷ್ಮೆಗೂಡು ಮಾರುಕಟ್ಟೆ ಕಟ್ಟಡವನ್ನು ಜಿಲ್ಲಾ ಕೈಗಾರಿಕೆ ಕೇಂದ್ರದ ವಿವಿಧ ಕಛೇರಿಗಳನ್ನು ಸ್ಥಳಾಂತರಿಸುವುದಕ್ಕಾಗಿ, ಶಿವಮೊಗ್ಗ ಜಿಲ್ಲಾಧಿಕಾರಿಗಳ ಕೋರಿಕೆಯಂತೆ ಕೈಗಾರಿಕಾ ಇಲಾಖೆಗೆ ತಾತ್ಕಾಲಿಕವಾಗಿ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1584 **ಭಾರತಿ ಆರ್. ನಾಯಕ್**

ಪೀಠಾಧಿಕಾರಿ(ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಅಗಲಕೋಟೆ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ ಕಟ್ಟಡವನ್ನು ತಾತ್ಕಾಲಿಕವಾಗಿ ಸರ್ಕಾರಿ ಸ್ವತಂತ್ರ ಪದವಿಪೂರ್ವ ಕಾಲೇಜಿಗೆ ನೀಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇಬೀರೇಕ್ಷೆ/ಅ.ಕೋಟೆ/ಪಪೂಕಾ/23/08-09, ದಿನಾಂಕ: 12-2-2009.

**ಪ್ರಸ್ತಾವನೆ:**

ಅಗಲಕೋಟೆ ಹ್ಯಾಂಡ್ ಪೋಸ್ಟ್, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ ಇಲ್ಲಿ ಹೊಸದಾಗಿ ಸರ್ಕಾರಿ ಪದವಿಪೂರ್ವ ಕಾಲೇಜು ಪ್ರಾರಂಭವಾಗಿದ್ದು, ಈ ಕಾಲೇಜಿಗೆ ಸ್ವಂತ ಕಟ್ಟಡ ಇಲ್ಲದಿರುವ ಕಾರಣ ಹಾಲಿ ಖಾಲಿ ಇರುವ ಅಗಲಕೋಟೆ ಬಿತ್ತನೆ ಕೋಠಿ ಕಟ್ಟಡವನ್ನು ಬಿಟ್ಟುಕೊಡುವಂತೆ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕೋರಿದ್ದು, ಈ ಬಗ್ಗೆ ರೇಷ್ಮೆ ಜಂಟಿ ನಿರ್ದೇಶಕರು, ಬಿತ್ತನೆ ಪ್ರದೇಶ, ಬಿಳಿದೇವಾಲಯ ಇವರು ಅಗಲಕೋಟೆ ಬಿತ್ತನೆ ಕೋಠಿ ಕಟ್ಟಡವನ್ನು ಪ್ರಸ್ತುತ ಇಲಾಖೆಯು ಬಳಸದೇ ಇರುವುದರಿಂದ ಕನಿಷ್ಠ ಬಾಡಿಗೆ ಆಧಾರದ ಮೇಲೆ ನೀಡುಬಹುದಾಗಿದೆ ಎಂದು ಅಭಿಪ್ರಾಯ ನೀಡಿದ್ದು, ಪ್ರಸ್ತುತ ಕಟ್ಟಡವನ್ನು ಇಲಾಖೆಯು ಉಪಯೋಗಿಸದೇ ಇರುವುದರಿಂದ ಹಾಗೂ ಶಿಕ್ಷಣ ಇಲಾಖೆಗೆ ಕಟ್ಟಡ ಅಗತ್ಯವಿರುವುದರಿಂದ ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಿಸಿಕೊಳ್ಳುವವರೆಗೆ ಅಗಲಕೋಟೆ ಬಿತ್ತನೆ ಕೋಠಿ ಕಟ್ಟಡವನ್ನು ತಾತ್ಕಾಲಿಕವಾಗಿ ಶಿಕ್ಷಣ ಇಲಾಖೆಗೆ ನೀಡಬಹುದಾಗಿದ್ದು, ಈ ಬಗ್ಗೆ ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ರೇಷ್ಮೆ ಇಲಾಖೆಯ ಅಗಲಕೋಟೆ ಬಿತ್ತನೆ ಕೋಠಿ ಕಟ್ಟಡವನ್ನು ಇಲಾಖೆಯು ಪ್ರಸ್ತುತ ಉಪಯೋಗಿಸದೇ ಇರುವುದರಿಂದ ಹಾಗೂ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪದವಿಪೂರ್ವ ಕಾಲೇಜಿಗೆ ಸ್ವಂತ ಕಟ್ಟಡ ಇಲ್ಲದಿರುವ ಕಾರಣ ವಿದ್ಯಾಭ್ಯಾಸಕ್ಕಾಗಿ ಸದರಿ ಬಿತ್ತನೆ ಕೋಠಿ ಕಟ್ಟಡವನ್ನು ಬಿಟ್ಟುಕೊಡುವಂತೆ ಆಯುಕ್ತರು, ಪದವಿಪೂರ್ವ ಶಿಕ್ಷಣ ಇಲಾಖೆ ಇವರು ಕೋರಿರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಶಿಫಾರಸ್ಸು ಮಾಡಿರುವಂತೆ ಅಗಲಕೋಟೆ ಬಿತ್ತನೆ ಕೋಠಿಯ ಕಟ್ಟಡಗಳನ್ನು ತಾತ್ಕಾಲಿಕ ಶಿಕ್ಷಣ ಇಲಾಖೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 9 ರೇಯೋವಿ 2009, ಬೆಂಗಳೂರು, ದಿನಾಂಕ: 9ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ರೇಷ್ಮೆ ಇಲಾಖೆಯ ಅಗಲಕೋಟೆ ಬಿತ್ತನೆಕೋಠಿಯ ಕಟ್ಟಡವನ್ನು ಅಗಲಕೋಟೆ ಸರ್ಕಾರಿ ಪದವಿಪೂರ್ವ ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಿಸಿಕೊಳ್ಳುವವರೆಗೆ ಕಾಲೇಜು ನಡೆಸುವುದಕ್ಕಾಗಿ ಪದವಿ ಪೂರ್ವ ಶಿಕ್ಷಣ ಇಲಾಖೆಗೆ ತಾತ್ಕಾಲಿಕವಾಗಿ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1585

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ(ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, (ಅಮಾನತ್ತು), ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಅಮಾನತ್ತಿನಿಂದ ತೆರವುಗೊಳಿಸುವ ಕುರಿತು.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/INV(G)/CBL/A2/CR-1/2009 ಚಿತ್ರದುರ್ಗ ದಿನಾಂಕ:27–01–2009.
2) ದಿನಾಂಕ:06–03–2009ರ ಆದೇಶ ಸಂಖ್ಯೆ:ಸಿಐ.10.ಎಂಜಿಎಸ್.2009.
3) ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು (ಅಮಾನತ್ತು) ಇವರ ದಿನಾಂಕ:20–02–2009ರ ಮನವಿ.
4) ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿ ಅರ್ಜಿ ಸಂಖ್ಯೆ:1089/2009ರಲ್ಲಿನ ದಿನಾಂಕ:11.03.2009ರ ಆದೇಶ.
5) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ:ಗಭೂಇ/ಸಿಬ್ಬಂದಿ.ಅ.3: 2008–09:10/114, ದಿನಾಂಕ:15–4–2009.

**ಪ್ರಸ್ತಾವನೆ:**

ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು (ಪ್ಲಾನಿಂಗ್ ಮತ್ತು ಮಾನಿಟರಿಂಗ್), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಸಂಪತ್ತು ಹೊಂದಿರುತ್ತಾರೆ ಎಂಬ ನಂಬಲರ್ಹ ಮಾಹಿತಿಯ ಆಧಾರದ ಮೇರೆಗೆ ಇವರ ವಿರುದ್ಧ ಚಿತ್ರದುರ್ಗ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ–13 (1)(ಇ) ಸಹವಾಚನ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ:1/2009 ರಂತೆ ಪ್ರಕರಣವನ್ನು ದಾಖಲಿಸಿಕೊಳ್ಳಲಾಗಿದ್ದು, ಈ ಸಂಬಂಧ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ವಿಶೇಷ ನ್ಯಾಯಾಧೀಶರು, ಚಿತ್ರದುರ್ಗ ಇವರಿಂದ ಪಡೆದು, ಅಧಿಕಾರಿಯ ಚಿತ್ರದುರ್ಗ ಮತ್ತು ಬೆಂಗಳೂರಿನಲ್ಲಿನ ನಿವಾಸಗಳನ್ನು, ಅಧಿಕಾರಿಯ ತಂದೆಯವರ ಚಿತ್ರದುರ್ಗ ವಾಸದ ಮನೆಯನ್ನು ಮತ್ತು ಅಧಿಕಾರಿಯ ಕಛೇರಿಯನ್ನು ದಿನಾಂಕ:23.01.2009ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧಿಸಲಾಗಿ, ಪ್ರಾಥಮಿಕ ತನಿಖೆಯಿಂದ ಅಧಿಕಾರಿಯು ತಮ್ಮ ಗೊತ್ತಾದ ಆದಾಯಕ್ಕಿಂದ ರೂ.1,12,38,673–00 ಗಳನ್ನು ಹೆಚ್ಚಾಗಿ ಅಕ್ರಮ ಆಸ್ತಿಪಾಸ್ತಿಗಳನ್ನು ಹೊಂದಿರುವುದು ತಿಳಿದುಬಂದಿರುವುದಾಗಿ ಮತ್ತು ಸದರಿ ಚರಾ ಮತ್ತು ಚಿರಾಸ್ತಿಗಳ ಮೌಲ್ಯವು ಸದರಿ ಅಧಿಕಾರಿಯ ನಿಗಧಿತ ಮೂಲಗಳಿಂದ ಗಳಿಸಿರುವ ವರಮಾನಕ್ಕಿಂತ ಶೇಕಡಾ 351.20 ರಷ್ಟು ಹೆಚ್ಚಿನ ಮೊತ್ತವಾಗಿರುತ್ತದೆಯೆಂದು ತಿಳಿಸುತ್ತಾ, ಅಧಿಕಾರಿಯು ತಮ್ಮ ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಅಕ್ರಮ ಆಸ್ತಿಗಳನ್ನು ಹೊಂದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ಇವರ ವಿರುದ್ಧದ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದುರಿಂದ ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು ಇವರನ್ನು ಕೂಡಲೇ ಅಮಾನತ್ತಿನಲ್ಲಿಡಲು ಹಾಗೂ ಇವರ ಲೀನ್‌ನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಮೇಲೆ(1) ರಲ್ಲಿ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿದ್ದರ ಮೇರೆಗೆ ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ (ನಿಯಂತ್ರಣ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ–10(1)(aa)ರ ಪ್ರಕಾರ ಅಮಾನತ್ತುಗೊಳಿಸಿ ಇವರ ಲೀನ್ ಅನ್ನು ಉಪನಿರ್ದೇಶಕರು, ಸೇಡಂ ಹುದ್ದೆಗೆ ವರ್ಗಾಯಿಸಿ ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಹೊರಡಿಸಿತ್ತು.

ಮೇಲೆ(2)ರಲ್ಲಿ ಓದಲಾದ ದಿನಾಂಕ:06–3–2009ರ ಆದೇಶವನ್ನು ಪ್ರಶ್ನಿಸಿ ಆಪಾದಿತ ಅಧಿಕಾರಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ:1089/2009 ನ್ನು ಸಲ್ಲಿಸಿದ್ದು ದಿನಾಂಕ:11–3–2009 ರಂದು ನೀಡಿರುವ ತೀರ್ಪಿನಲ್ಲಿ ದಿನಾಂಕ:06–3–2009 ರ ಸರ್ಕಾರಿ ಆದೇಶದಲ್ಲಿ CCA ನಿಯಮಾವಳಿಗಳ ನಿಯಮ–10ರ ಉಪನಿಯಮ(3)

ರನ್ವಯ ಪೂರ್ಣ ಪ್ರಮಾಣದಲ್ಲಿ ಪರಿಶೀಲಿಸದೆ ಆದೇಶವನ್ನು ಹೊರಡಿಸಲಾಗಿದೆಯೆಂದು, ಸದರಿ ಅಧಿಕಾರಿಯ ಮೇಲೆ ಮಾಡಿರುವ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗದ ಹೊರತು, ಆಪಾದನೆಗಳನ್ನು ಸಬಲೀಕರಿಸಬಹುದಾದ ಸಾಕ್ಷಿಪುರಾವೆಗಳು ಇಲ್ಲದ ಹೊರತು ಅಮಾನತ್ತಿನಲ್ಲಿಡಲು ಸಾದ್ಯವಿಲ್ಲವೆಂದು ಉಲ್ಲೇಖಿಸುತ್ತಾ ಮೇಲೆ (2)ರಲ್ಲಿ ಓದಲಾದ ದಿನಾಂಕ:06-3-2009ರ ಆದೇಶವನ್ನು ರದ್ದುಗೊಳಿಸಿ, ಸರ್ಕಾರವು KCS (CC&A) Rulesನ ನಿಯಮ-10(3) ರನ್ವಯ ಪುನರ್ ಪರಿಶೀಲಿಸಿ ಮರು ನಿರ್ಧಾರ ತೆಗೆದುಕೊಳ್ಳಬಹುದೆಂದು ಉಲ್ಲೇಖಿಸಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಆಪಾದಿತ ಅಧಿಕಾರಿಯು, ತಮ್ಮ ಮೇಲೆ ಹೊರಿಸಲ್ಪಟ್ಟಿರುವ ಆರೋಪಗಳು ಸತ್ಯಕ್ಕೆ ದೂರವಾದವು ಎಂದೂ, ಮೇಲಾಗಿ ಸದರಿ ಆರೋಪಗಳ ಕುರಿತು ತನಿಖೆ ನಡೆಯುತ್ತಿದ್ದು, ಆರೋಪವು ಸಾಬೀತಾದಲ್ಲಿ ನಿಯಮಾನುಸಾರ ಮುಂದಿನ ಕ್ರಮವಹಿಸಲು ಅವಕಾಶವಿರುತ್ತದೆಯಾದ್ದರಿಂದ ಆರೋಪಗಳು ಸಾಬೀತಾದಲ್ಲಿ ಆನಂತರವೇ ಕ್ರಮ ಜರುಗಿಸಬೇಕೆಂದು ಕೋರಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ:15-4-2009ರ ಪತ್ರದಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿ ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಆಪಾದಿತ ಅಧಿಕಾರಿಯನ್ನು ಸೇವೆಯಲ್ಲಿ ಪುನರ್‌ಸ್ಥಾಪನೆ ಮಾಡುವ ಕುರಿತು ಪ್ರಸ್ತಾವಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:-

**ಸರ್ಕಾರದ ಆದೇಶ ಸಂಖ್ಯೆ:ಸಿಐ.10:ಎಂಜಿಎಸ್.2009, ಬೆಂಗಳೂರು, ದಿನಾಂಕ: 16ನೇ ಜುಲೈ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ:1089/2009 ರಲ್ಲಿ ದಿನಾಂಕ:11-3-2009 ರಂದು ನೀಡಿರುವ ತೀರ್ಪಿನ ಮೇರೆಗೆ ಶ್ರೀ ಎಸ್.ಪಿ.ರಾಜು, ಉಪ ನಿರ್ದೇಶಕರು, ಸೇಡಂ (ಲೀನ್), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ವಿರುದ್ಧದ ಆರೋಪಗಳ ಕುರಿತು ನಿಯಮಾನುಸಾರ ವಿಚಾರಣೆಯನ್ನು ಕಾಯ್ದರಿಸಿ ಅಮಾನತ್ತನ್ನು ತೆರವುಗೊಳಿಸಲಾಗಿದೆ.

ಅಮಾನತ್ತು ತೆರವುಗೊಳಿಸಿದ ನಂತರ ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ ಇವರನ್ನು ಶ್ರೀ ಬಿ.ಎನ್.ಶಂಕರ್, ಉಪನಿರ್ದೇಶಕರು, ಹೊಸಪೇಟೆ ಇವರು ರಜೆಯ ಮೇಲೆ ತೆರಳಿದ್ದು, ಖಾಲಿಯಿರುವ ಉಪನಿರ್ದೇಶಕರು, ಹೊಸಪೇಟೆ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೂ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1737

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ(ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕಾಗಿ ವಿವಿಧ ಪಂಚಾಯತ್‌ರಾಜ್ ಸಂಸ್ಥೆಗಳ ಹಂತಗಳಲ್ಲಿ ಆಡಳಿತವನ್ನು ಸುವ್ಯವಸ್ಥೆಗೊಳಿಸಲು ಹೊರ ಗುತ್ತಿಗೆಯ ಆಧಾರದ ಮೇಲೆ ಸಿಬ್ಬಂದಿ ಸೇವೆ ಪಡೆಯುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ಗ್ರಾಅಪ.12:ಉಖಾಯೋ:2006 ಬೆಂಗಳೂರು, ದಿನಾಂಕ:9.3.2007.
2. ಸರ್ಕಾರದ ಆದೇಶ ಸಂ.ಗ್ರಾಅಪ.12:ಉಖಾಯೋ.2006:08 ಬೆಂಗಳೂರು, ದಿನಾಂಕ:4.5.2007.
3. ಸರ್ಕಾರದ ಆದೇಶ ಸಂ.ಗ್ರಾಅಪ.104:ಉಖಾಯೋ.2007: ದಿನಾಂಕ:2.4.2007.
4. ಕೇಂದ್ರ ಸರ್ಕಾರದ ಪತ್ರ ಸಂ.J-11011/18/2007-NREGA ದಿನಾಂಕ:19.03.2009

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಈಗ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಯಡಿ, ಸಾಧಿಸಲಾದ ಪ್ರಗತಿಯು ರಾಷ್ಟ್ರದ ಇತರೆ ರಾಜ್ಯಗಳಲ್ಲಿ ಸಾಧಿಸಿದ ಪ್ರಗತಿಗೆ ಹೋಲಿಸಿದಾಗ, ತೀರಾ ಕಡಿಮೆ ಇದ್ದು, ಆಡಳಿತ ಯಂತ್ರವನ್ನು ಸಮರ್ಪಕವಾಗಿ ನಿರ್ವಹಿಸಲು ಹಾಗೂ ಯೋಜನೆಯಲ್ಲಿ ಬರುವ ಎಲ್ಲಾ ಪ್ರತಿಯೊಂದು ಚಟುವಟಿಕೆಗಳ ಮೇಲ್ವಿಚಾರಣೆ, ಪರಿವೀಕ್ಷಣೆಯನ್ನು ಅಧಿನಿಯಮದ ಪ್ರಕಾರ ಕ್ರಮಬದ್ಧವಾಗಿ ಸುವ್ಯವಸ್ಥೆಗೊಳಿಸುವುದು ಅನಿವಾರ್ಯವೆಂದು ಅಭಿಪ್ರಾಯಪಡಲಾಗಿದೆ. ಮೊಟ್ಟ ಮೊದಲು, ಉಲ್ಲೇಖ(1)ರಲ್ಲಿ, ಮೊದಲನೇ ಹಂತದ, ಐದು ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ದಾವಣಗೆರೆ ಮತ್ತು ಚಿತ್ರದುರ್ಗ ಇವುಗಳ 1091 ಗ್ರಾಮ ಪಂಚಾಯತ್‌ಗಳಿಗೆ, ಕಾರ್ಯನಿರ್ವಾಹಕ ಸಹಾಯಕರ ಹುದ್ದೆಯನ್ನು ಪ್ರತಿಯೊಂದು ಗ್ರಾಮ ಪಂಚಾಯತಿಗೆ ಒಂದರಂತೆ ಸೃಜಿಸಿ ಸದರಿ ಕಾರ್ಯನಿರ್ವಾಹಕ ಸಹಾಯಕರ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಸಂಬಂಧಪಟ್ಟ ಗ್ರಾಮ

ಪಂಚಾಯತಿಗಳು ಆರು ತಿಂಗಳವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕಾತಿ ಮಾಡಿಕೊಳ್ಳಲು ಆದೇಶವಾಗಿರುತ್ತದೆ. ಇದೇ ರೀತಿ, ದಿನಾಂಕ:1–4–2007 ರಿಂದ ಜಾರಿಗೆ ಬಂದಿರುವ ಎರಡನೇ ಹಂತದ ಜಿಲ್ಲೆಗಳಾದ ಬಳ್ಳಾರಿ, ಬೆಳಗಾಂ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಮತ್ತು ಕೊಡಗು ಇವುಗಳಿಗೂ ಸಹ ಉಲ್ಲೇಖ(2)ರಲ್ಲಿ, 1516 ಗ್ರಾಮ ಪಂಚಾಯತ್‌ಗಳಿಗೆ, ಪ್ರತಿ ಗ್ರಾಮ ಪಂಚಾಯತಿಗೆ ಒಂದರಂತೆ 1516 ಕಾರ್ಯನಿರ್ವಾಹಕ ಸಹಾಯಕರ ಹುದ್ದೆಗಳನ್ನು ಉಲ್ಲೇಖ(1)ರಲ್ಲಿ ತಿಳಿಸಿರುವ ಷರತ್ತು ಮತ್ತು ನಿಯಮಗಳಂತೆ, ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಆದೇಶಿಸಲಾಗಿತ್ತು.

ಉಲ್ಲೇಖ(3)ರಲ್ಲಿ, ಮೂರನೇ ಹಂತದ 18 ಜಿಲ್ಲೆಗಳ 3021 ಗ್ರಾಮ ಪಂಚಾಯತ್‌ಗಳಿಗೆ, ಪ್ರತಿ ಗ್ರಾಮ ಪಂಚಾಯತಿಗೆ ಒಂದರಂತೆ, ತಾಂತ್ರಿಕ ಸಹಾಯಕರ ಹುದ್ದೆಗಳನ್ನು ಸೃಜಿಸಿ ಹೊರ ಗುತ್ತಿಗೆಯ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಆದೇಶಿಸಲಾಗಿತ್ತು. ಮೊದಲನೇ ಹಾಗೂ ಎರಡನೇ ಹಂತದ ಜಿಲ್ಲೆಗಳ ಗ್ರಾಮ ಪಂಚಾಯತಿಗಳಿಗೆ ನೇಮಕಾತಿಯಾದ ಕಾರ್ಯನಿರ್ವಾಹಕ ಸಹಾಯಕರ ಹುದ್ದೆಗಳನ್ನು ಹಾಗೂ ಮೂರನೇ ಹಂತದ ಜಿಲ್ಲೆಗಳ ಗ್ರಾಮ ಪಂಚಾಯತಿಗಳಿಗೆ ನೇಮಕಾತಿಯಾದ ತಾಂತ್ರಿಕ ಸಹಾಯಕರ ಹುದ್ದೆಗಳ ನಾಮ ನಿರ್ದೇಶನವನ್ನು ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಲ್ಲಿ ಆಡಳಿತ ಸಹಾಯಕರೆಂದು (Administrative Assistant) ಒಂದೇ ಇರುವಂತೆ ಬದಲಾಯಿಸಲು ತೀರ್ಮಾನಿಸಿದೆ.

ಜಿಲ್ಲೆಗಳಲ್ಲಿರುವ ಜಿಲ್ಲಾ ಪಂಚಾಯತ್‌ನ ಪಂಚಾಯತ್‌ರಾಜ್ ಇಂಜಿನೀಯರಿಂಗ್ ಇಲಾಖೆಯ ಅಭಿಯಂತರರು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳನ್ನು ನಿಗಾ ವಹಿಸಿ, ಪರಿವೀಕ್ಷಣೆ ಮಾಡಲು ಸಾಧ್ಯವಾಗದ ಕಾರಣ ಹಾಗೂ ಜಿಲ್ಲಾ ಪಂಚಾಯತ್‌ನಲ್ಲಿ ಹಾಲಿ ಇರುವ ಅನೇಕ ಯೋಜನೆಗಳ ಕಾಮಗಾರಿಗಳು, ವಿವಿಧ ಸ್ಥಳಗಳಿಗೆ ಹರಡಿರುವುದರಿಂದ ಹಾಗೂ ಜಿಲ್ಲಾ ಪಂಚಾಯತ್ ನಿಯಮಿತ ಕಾಮಗಾರಿಗಳಿಗೆ ಹೆಚ್ಚಾಗಿ ವಿಶೇಷ ಗಮನ ಕೊಡಬೇಕಾಗಿರುವುದರಿಂದ ಹಾಗೂ ಸಂಬಂಧಪಟ್ಟ ಗ್ರಾಮ ಪಂಚಾಯತಿಯ ಕಾರ್ಯದರ್ಶಿಯು ಕೂಡ, ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳನ್ನು ಪೂರ್ಣ ಪ್ರಮಾಣದಲ್ಲಿ ಕೈಗೊಳ್ಳಲು ಸಾಧ್ಯವಾಗದ ಕಾರಣ, ಸರ್ಕಾರವು ತಾಲ್ಲೂಕು ಮಟ್ಟದಲ್ಲಿ ಪ್ರತಿ ನಾಲ್ಕು ಗ್ರಾಮ ಪಂಚಾಯತ್‌ಗಳಿಗೆ, ಉದ್ಯೋಗ ಖಾತರಿ ಯೋಜನೆಯ ಇಂಜಿನೀಯರಿಂಗ್ ಕಾಮಗಾರಿಗಳನ್ನು ಉಸ್ತುವಾರಿ ಮಾಡಲು, ಒಬ್ಬ ತಾಂತ್ರಿಕ ಸಹಾಯಕನನ್ನು ಹೊರ ಗುತ್ತಿಗೆಯ ಆಧಾರದ ಮೇಲೆ ಸೇವೆ ಪಡೆಯಲು (ರಾಜ್ಯದಲ್ಲಿ ಒಟ್ಟು 1407 ತಾಂತ್ರಿಕ ಸಹಾಯಕರು) ತೀರ್ಮಾನಿಸಲಾಗಿದೆ. ಅದರಂತೆಯೇ ತಾಲ್ಲೂಕು ಮಟ್ಟದಲ್ಲಿ ಕೃಷಿ, ನೀರಾವರಿ, ಜಲಾನಯನ, ಅರಣ್ಯ, ತೋಟಗಾರಿಕೆ ಹಾಗೂ ಇತರ ಇಲಾಖೆಯ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಹಾಗೂ ಪರಿಣಾಮಕಾರಿಯಾಗಿ ಪರಿವೀಕ್ಷಣೆ ಮಾಡಲು ಪ್ರತಿ ನಾಲ್ಕು ಗ್ರಾಮ ಪಂಚಾಯತಿಗಳಿಗೆ ಒಬ್ಬ ತಾಂತ್ರಿಕ ಸಹಾಯಕರ ಸೇವೆಯನ್ನು ಹೊರ ಗುತ್ತಿಗೆಯ ಆಧಾರದ ಮೇಲೆ ಪಡೆಯಲು(ರಾಜ್ಯದಲ್ಲಿ ಒಟ್ಟು 1407 ತಾಂತ್ರಿಕ ಸಹಾಯಕರು) ತೀರ್ಮಾನಿಸಲಾಗಿದೆ.

ಉಲ್ಲೇಖ(3)ರಲ್ಲಿ ರಾಜ್ಯದ ಎಲ್ಲಾ 176 ತಾಲ್ಲೂಕು ಪಂಚಾಯತಿಗಳಿಗೆ, ಪ್ರತಿ ತಾಲ್ಲೂಕು ಪಂಚಾಯತಿಗೆ ಒಂದರಂತೆ, ಹೆಚ್ಚುವರಿ ಕಾರ್ಯಕ್ರಮ ಅಧಿಕಾರಿಯ ಹುದ್ದೆಯನ್ನು ಒಟ್ಟು 176 ಹುದ್ದೆ ಗಳನ್ನು ಅನುಷ್ಟಾನ ಇಲಾಖೆಗಳಿಂದ ನಿಯೋಜನೆಯ ಮೂಲಕ ತುಂಬಲು/ನೇಮಕಾತಿ ಮಾಡಲು ಆದೇಶಿಸಲಾಗಿತ್ತು. ಸದರಿ ಹುದ್ದೆಯ ಅಧಿಕಾರಿಯವರು, ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯವರಿಗೆ, ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದ ಕಾಮಗಾರಿಗಳನ್ನು ನೋಡಿಕೊಳ್ಳಲು ಸಮನ್ವಯ ಮಾಡಲು ನೆರವಾಗುತ್ತಾರೆ. ಈಗ ಸದರಿ 176 ಹೆಚ್ಚುವರಿ ಕಾರ್ಯಕ್ರಮದ ಅಧಿಕಾರಿಗಳ ಹುದ್ದೆಗಳನ್ನು ಕ್ಷೇತ್ರಮಟ್ಟದ/ಅನುಷ್ಠಾನ ಇಲಾಖೆಗಳಲ್ಲಿ ಸಿಬ್ಬಂದಿ ಕೊರತೆಯ ಕಾರಣ, ನಿಯೋಜನೆ ಮೇರೆಗೆ ತುಂಬಲು ಸಾಧ್ಯವಾಗದೇ ಇರುವ ಕಾರಣ ಸದರಿ ಹುದ್ದೆಗಳನ್ನು ನಿಯೋಜನೆ ಮೂಲಕ ತುಂಬುವ ಬದಲಾಗಿ ತಾತ್ಕಾಲಿಕವಾಗಿ ಹೊರಗುತ್ತಿಗೆಯ ಆಧಾರದ ಮೇಲೆ ಸೇವೆ ಪಡೆಯಲು ನಿರ್ಧರಿಸಿದೆ.

ತಾಲ್ಲೂಕು ಮಟ್ಟದಲ್ಲಿ, ಹೆಚ್ಚುವರಿ ಕಾರ್ಯಕ್ರಮ ಅಧಿಕಾರಿಯವರು ಇರುವುದಲ್ಲದೆ, ಸಾಮಾಜಿಕ ತಪಾಸಣೆ ಮತ್ತು ಕುಂದುಕೊರತೆಗಳ ನಿವಾರಣಾ ಕೋಶ, ತಾಂತ್ರಿಕ ಕೋಶ, ಮಾಹಿತಿ ನಿರ್ವಹಣಾ ವ್ಯವಸ್ಥೆಯ ಕೋಶ, ತರಬೇತಿ ಮತ್ತು ಐಇಸಿ ಕೋಶಗಳನ್ನು ಸ್ಥಾಪಿಸಬೇಕಾಗಿದೆ. ಈ ಘಟಕಗಳಿಗೆ, ಸಿಬ್ಬಂದಿ ಬೆಂಬಲ ಅಗತ್ಯವಿದೆ. ಇದೇ ರೀತಿ, ಜಿಲ್ಲಾ ಮಟ್ಟದಲ್ಲಿ ಕೂಡ, ಮೇಲಿನ ಕೋಶಗಳನ್ನು ಸ್ಥಾಪಿಸಿ, ಅಗತ್ಯವಾದ ಸಿಬ್ಬಂದಿಯ ಬೆಂಬಲವನ್ನು ಕೊಡಲು ನಿರ್ಧರಿಸಿದೆ. ತಾಲ್ಲೂಕು ಮಟ್ಟದಲ್ಲಿ ಸಾಮಾಜಿಕ ತಪಾಸಣೆ ಮತ್ತು ಕುಂದುಕೊರತೆಗಳ ನಿವಾರಣಾ ಕೋಶಕ್ಕೆ ಪ್ರತಿಯೊಂದು ತಾಲ್ಲೂಕು ಪಂಚಾಯತಿಗೆ ಒಂದರಂತೆ

176 ಸಂಯೋಜಕರು ಮತ್ತು 176 ಸಹಾಯಕರುಗಳ ಸೇವೆಯನ್ನು ಪಡೆಯುಲು ತೀರ್ಮಾನಿಸಿದೆ. ತಾಂತ್ರಿಕ ಕೋಶ (ಕಾಮಗಾರಿಗಳು) ಇದರಡಿ, ಪ್ರತಿಯೊಂದು ತಾಲ್ಲೂಕು ಪಂಚಾಯತಿಗೆ ಒಂದರಂತೆ 176 ತಾಂತ್ರಿಕ ಸಂಯೋಜಕರು ಮತ್ತು 176 ತಾಂತ್ರಿಕ ಸಹಾಯಕರುಗಳ ಸೇವೆಯನ್ನು ಪಡೆಯಲು ತೀರ್ಮಾನಿಸಿದೆ. ತರಬೇತಿ ಮತ್ತು ಐಇಸಿ ಕೋಶದಡಿ, ಪ್ರತಿಯೊಂದು ತಾಲ್ಲೂಕು ಪಂಚಾಯತಿಗೆ ಒಂದರಂತೆ 176 ಮಾಹಿತಿ, ಶಿಕ್ಷಣ ಮತ್ತು ಸಂವಹನ ಸಂಯೋಜಕರ (IEC Co-ordinator ) ಸೇವೆಯನ್ನು ಹೊರಗುತ್ತಿಗೆಯ ಆಧಾರದ ಮೇಲೆ ಪಡೆಯಲು ತೀರ್ಮಾನಿಸಿದೆ. ಹಾಗೆಯೇ, ಮಾಹಿತಿ ನಿರ್ವಹಣಾ ವ್ಯವಸ್ಥೆಯನ್ನು ತಾಲ್ಲೂಕು ಮಟ್ಟದಲ್ಲಿ ನಿರ್ವಹಿಸಲು, MIS ಸಂಯೋಜಕರ ಸೇವೆಯ ಅವಶ್ಯಕತೆ ಇರುತ್ತದೆ. ಈಗಾಗಲೇ, ತಾಲ್ಲೂಕು ಮಟ್ಟದಲ್ಲಿ ಉಲ್ಲೇಖ(3)ರಲ್ಲಿ ಪ್ರತಿಯೊಂದು ತಾಲ್ಲೂಕು ಪಂಚಾಯತಿಗೆ ಒಂದರಂತೆ, 176 ಗಣಕ ಸಹಾಯಕರ ಹುದ್ದೆಗಳನ್ನು ಸೃಜಿಸಿದ್ದು ಈಗ ಸದರಿ ಹುದ್ದೆಗಳ ಪದನಾಮವನ್ನು ಇನ್ನು ಮುಂದೆ MIS ಸಂಯೋಜಕರೆಂದು ಹೆಸರಿಸಿ ಬದಲಾವಣೆ ಮಾಡಲು ನಿರ್ಧರಿಸಲಾಗಿದೆ.

ಜಿಲ್ಲಾ ಮಟ್ಟದಲ್ಲಿ ಕೂಡ ತಾಲ್ಲೂಕು ಮಟ್ಟದ ಮಾದರಿಯಂತೆ ಸಾಮಾಜಿಕ ತಪಾಸಣೆ ಮತ್ತು ಕುಂದು ಕೊರತೆಗಳ ನಿವಾರಣಾ ಕೋಶದಡಿ ಪ್ರತಿ ಜಿಲ್ಲಾ ಪಂಚಾಯತಿಗೆ ಒಂದರಂತೆ 29 ಸಂಯೋಜಕರು ಹಾಗೂ 29 ಸಹಾಯಕರುಗಳ ಸೇವೆಯನ್ನು ಹೊರಗುತ್ತಿಗೆಯ ಆಧಾರದ ಮೇಲೆ ಪಡೆಯಲು ನಿರ್ಧರಿಸಲಾಗಿದೆ ಮತ್ತು ಈಗಾಗಲೇ ಜಿಲ್ಲಾ ಮಟ್ಟದಲ್ಲಿ ಪ್ರತಿ ಜಿಲ್ಲಾ ಪಂಚಾಯತಿಗೆ ಒಂದರಂತೆ ಉಲ್ಲೇಖ (3)ರಲ್ಲಿ 29 ಜಿಲ್ಲಾ ಕಾರ್ಯನಿರ್ವಾಹಕ ಸಹಾಯಕರ ಹುದ್ದೆಗಳನ್ನು ಸೃಜಿಸಿದ್ದು, ಸದರಿ ಹುದ್ದೆಗಳ ಪದನಾಮವನ್ನು ಇನ್ನು ಮುಂದೆ MIS Co-ordinator ಎಂದು ಹೆಸರಿಸಿ ಬದಲಾವಣೆ ಮಾಡಲು ನಿರ್ಧರಿಸಿದೆ. ತರಬೇತಿ ಮತ್ತು IEC ಕೋಶದಡಿ ಪ್ರತಿ ಜಿಲ್ಲಾ ಪಂಚಾಯತಿಗೆ ಒಂದರಂತೆ 29 ಮಾಹಿತಿ, ಶಿಕ್ಷಣ ಮತ್ತು ಸಂವಹನ ಸಂಯೋಜಕರು ಹಾಗೂ ಇದೇ ಕೋಶದಡಿ ಪ್ರತಿ ಜಿಲ್ಲಾ ಪಂಚಾಯತಿಗೆ ಒಂದರಂತೆ 29 ಸಹಾಯಕರುಗಳ ಸೇವೆಯನ್ನು ಹೊರಗುತ್ತಿಗೆಯ ಆಧಾರದ ಮೇಲೆ ಪಡೆಯಲು ನಿರ್ಧರಿಸಿದೆ. ಉಸ್ತುವಾರಿ, ಮೌಲ್ಯಮಾಪನ ಮತ್ತು ಸಂಶೋಧನಾ ಪರಿಣಿತ ಘಟಕದಡಿ ಸಮರ್ಪಕವಾಗಿ ಎಲ್ಲಾ ಚಟುವಟಿಕೆಗಳನ್ನು ನಿಗಾ ವಹಿಸಿ ಉಸ್ತುವಾರಿ ಮಾಡಲು ಜಿಲ್ಲಾ ಮಟ್ಟದಲ್ಲಿ ಪ್ರತಿ ಜಿಲ್ಲಾ ಪಂಚಾಯತಿಗೆ ಒಂದರಂತೆ 29 ಪರಿಣಿತ ಸಂಶೋಧಕರುಗಳ ಸೇವೆಯನ್ನು ಹೊರ ಗುತ್ತಿಗೆಯ ಆಧಾರದ ಮೇಲೆ ಪಡೆಯಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.104:ಉಖಾಯೋ:2007, ಬೆಂಗಳೂರು, ದಿನಾಂಕ: 5ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ–2005ರಲ್ಲಿ ತಿಳಿಸಿರುವ ಎಲ್ಲಾ ಪ್ರಕ್ರಿಯೆಗಳನ್ನು ಯೋಜನೆಯ ಅನುಷ್ಠಾನದಲ್ಲಿ ಕ್ರಮಬದ್ಧವಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸಲು ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿ ಹಂತಗಳಲ್ಲಿ ಸಿಬ್ಬಂದಿ ಸೇವೆಗಳನ್ನು ಹೊರ ಗುತ್ತಿಗೆಯ ಆಧಾರದ ಮೇಲೆ ಪಡೆಯಲು ಒಟ್ಟು ಯೋಜನಾ ವೆಚ್ಚದ ಶೇಕಡಾ 6ರಷ್ಟಿನ ಮಿತಿಗೆ ಒಳಪಟ್ಟು ಆಯಾ ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿನ ಬೇಡಿಕೆ ಹಾಗೂ ಪ್ರಗತಿಗೆ ಅನುಗುಣವಾಗಿ ಅನುಬಂಧದಲ್ಲಿರುವಂತೆ ಸರ್ಕಾರವು ಮಂಜೂರಾತಿ ನೀಡಿದೆ. ಆದರೆ, ಬೆಂಗಳೂರು(ನಗರ), ಬೆಂಗಳೂರು(ಗ್ರಾಮಾಂತರ), ರಾಮನಗರ, ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳು ಮಾತ್ರ ಆಯಾ ಜಿಲ್ಲೆಗಳ ಬೇಡಿಕೆಗೆ ಅನುಗುಣವಾಗಿ ಅಗತ್ಯ ಸಿಬ್ಬಂದಿ ಸೇವೆ ಪಡೆಯುವ ಕುರಿತು ನಿರ್ದೇಶನಾಲಯಕ್ಕೆ ಸೂಕ್ತ ಪ್ರಸ್ತಾವನೆ ಸಲ್ಲಿಸಿ ಪೂರ್ವಾನುಮೋದನೆ ಪಡೆದು ಸಿಬ್ಬಂದಿ ಸೇವೆ ಪಡೆಯಲು ಕ್ರಮ ವಹಿಸುವುದು. ಈ ಆದೇಶವು ಕೂಡಲೇ ಜಾರಿಗೆ ಬರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂ.ಆಇ/261/ವೆಚ್ಚ–6/09 ದಿನಾಂಕ: 29.5.2009ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ.ಜಾಫರ್**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ

ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ANNEXURE to GO No:RDP 104 EGS 2007 dated:05.06.2009**

**Details of the sanctioned services of the professionals to be outsourced for the implementation of NREGA at various PRI level**

| No. | Name of the Professional | Maximum no. of persons allowed to be procured based on the performance | Maximum consolidated pay per month per professional (Amt in Rs) | | | Minimum requirements | | Reamrks |
|---|---|---|---|---|---|---|---|---|
| | | | Remuneration | TA/DA | Total | Educational qualification | Experience in the related field | |
| I | **Grama Panchayath(GP)** | | | | | | | |
| 1 | Administrative assistant for every GP (Executive Assistants and Technical Assistant)* | 1 per GP | 3000.00 | 500.00 | 3500.00 | PUC-pass with minmium of 40%marks with computer knowledge | 2-3 years | He/she will discharge all activities as prescribed in Annexure-A4 (page-99) of operational gudielines and all other works entrusted by the GP |
| 2 | One technical assistant for at least 4 GP (Engineer) | Maximum no.of technical professionals allowed to be procured in combination is left to the CEO/EO for the GP or group of GPs depending on the demand for employment | 2000.00 | 1000.00 | 3000.00 | Diploma in civil or any other equivalent qualifications with computer knowldege | 2-3 years | For the proposed remuneration of Rs.3000.00 he/she must get the minimum execution of work worth Rs.4.00 lakhs per month and 0.5% incentive can be given for the over and above Rs.4.00 lakhs execution for the month |
| 3 | One technical assistant for at least 4 GP (Agriculture/watershed/Forest etc..) | | 2000.00 | 1000.00 | 3000.00 | Graduation in Agriculture or Forestry or horticulture or any other equivalent qualification with computer knowledge | 2-3 years | |

| No. | Name of the Professional | Maximum no. of persons allowed to be procured based on the performance | Maximum consolidated pay per month per professional (Amt in Rs) | | | Minimum requirements | | Reamrks |
|---|---|---|---|---|---|---|---|---|
| | | | Remuneration | TA/DA | Total | Educational qualification | Experience in the related field | |
| **II** | **Programme Officer(PO) office(Block)** | | | | | | | |
| 1 | Assistant Programme Officer | 1 per Taluk | 15000.00 | 5000.00 | 20000.00 | Any Post Graduation with computer knowledge.Preference will be given to MCA/MSW/MA (Rural Development) | 2-3 years | |
| 2 | Social Audit and Grievance Redressal Cell | | | | | | | |
| | a)Co-ordinator | 1 per Taluk | 10000.00 | 2000.00 | 12000.00 | Will be selected by ANSSIRD, Mysore | | |
| | b)Assistant | 1 per Taluk | 6000.00 | 2000.00 | 8000.00 | Any Graduation or any other equivalent qualification with computer knowledge | 2-3 years | |
| 3 | Technical Cell(Works) | | | | | | | |
| | a)Technical Co-ordinator | 1 per Taluk | 10000.00 | 2000.00 | 12000.00 | Bachelor of Engineer in civil or any other equivalent qualifications with computer knowldege | | |
| 4 | Training & IEC Cell | | | | | | | |
| | a)IEC Co-ordinator | 1 per Taluk | 10000.00 | 2000.00 | 12000.00 | Post Graduation in Mass communication or any post graduation with diploma in mass communication or related subjects and computer knowledge. In the absence of the above any post graduation with computer knowledge | 2-3 years | |

| No. | Name of the Professional | Maximum no. of persons allowed to be procured based on the performance | Maximum consolidated pay per month per professional (Amt in Rs) | | | Minimum requirements | | Reamrks |
|---|---|---|---|---|---|---|---|---|
| | | | Remuneration | TA/DA | Total | Educational qualification | Experience in the related field | |
| 5 | MIS Co-ordinator (Data Entry operator)* | 1 per Taluk | 10000.00 | 2000.00 | 12000.00 | MCA or Bachelor of Engineer in computer/Electronics or Graduation in computer science or any other equivalent qualification. In the absence of such candidates mentioned above graduation with PGDC or any other equivalent course by the recognised university. | 2-3 years | |
| **III** | **District Progreamme co-ordinator(DPC) Office** | | | | | | | |
| 1 | Socail Audit and Grievance Redressal Cell | | | | | | | |
| | a)Co-ordinator | 1 per district | 12000.00 | 3000.00 | 15000.00 | Will be selected by ANSSIRD, Mysore | | |
| | b)Assistant | 1 per district | 6000.00 | 2000.00 | 8000.00 | Any Graduation or any other equivalent qualification with computer knowledge | 2-3 years | |
| 2 | Training & IEC Cell | | | | | | | |
| | a)Co-ordinator | 1 per district | 12000.00 | 3000.00 | 15000.00 | Post Graduation in Mass communication or any post graduation with diploma in mass communication or related subjects and computer knowledge. In the absence of the such candidates mentione above any post graduation with computer knowledge | 2-3 years | |

| No. | Name of the Professional | Maximum no. of persons allowed to be procured based on the performance | Maximum consolidated pay per month per professional (Amt in Rs) | | | Minimum requirements | | Reamrks |
|---|---|---|---|---|---|---|---|---|
| | | | Remuneration | TA/DA | Total | Educational qualification | Experience in the related field | |
| | b)Assistant | 1 per district | 6000.00 | 2000.00 | 8000.00 | Any Graduation or any other equivalent qualification with computer knowledge | 2-3 years | |
| 3 | Monitoring, Evaluation & Research Expert | 1 per district | 12000.00 | 3000.00 | 15000.00 | Post Graduation in statistics or any other equivalent qualification or Any post graduation with diploma in statistics/reseach methodolgy related subjects and computer knowledge | 2-3 years | |
| 4 | MIS Co-ordinator (District Programme Executive)* | 1 per district | 12000.00 | 3000.00 | 15000.00 | Graduation in computer science or Diploma in Computer Science/Electronics or any other equivalent qualification | 2-3 years | |

*The name of the professionals given in the bracket is the one approved in the earlier orders.

**Dr. P.C. JAFFER, I.A.S.**
Director, NREGA
Rural Developmwnt and Panchayath Raj Department, Bangalore

P.R. 1557

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಕುಕ 86 ಹೆಚ್‌ಎಸ್‌ಹೆಚ್ 2009(ಭಾಗ–2), ಬೆಂಗಳೂರು, ದಿನಾಂಕ:30ನೇ ಜೂನ್, 2009**

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವಾನಿರತ ವೈದ್ಯಾಧಿಕಾರಿಗಳನ್ನು 2009–10 ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಉಲ್ಲೇಖ:** 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ: ಜೆಆರ್‌ಬ(ಎಂ) 45/ 2008–09 ದಿನಾಂಕ: 09/06/09 ಮತ್ತು 26/06/2009.

2. ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ:ಪಿಜಿಇಟಿ-9/ ಕೌನ್ಸಿಲಿಂಗ್/01–2009–10 ದಿನಾಂಕ:26/06/2009.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾನಿರತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು 2009–10ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಉಲ್ಲೇಖ-2 ರಲ್ಲಿ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಿರುವಂತೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಆಯ್ಕೆ ಪಟ್ಟಿಯೊಂದಿಗೆ ಉಲ್ಲೇಖ-1 ರಲ್ಲಿ ಕಳುಹಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೂಡಲೇ ಜಾರಿಗೆ ಬರುವಂತೆ ಈ ಅಧಿಸೂಚನೆಯ ಅನುಬಂಧದಲ್ಲಿರುವ 102 ವೈದ್ಯಾಧಿಕಾರಿಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ವಿಷಯ ಮತ್ತು ಕಾಲೇಜುಗಳಿಗೆ ನಿಯೋಜಿಸಲಾಗಿದೆ.

2. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು/ ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ಹಾಗೂ ಪ್ರಸ್ತುತ ಜಾರಿಯಲ್ಲಿರುವ ನಿಯಮಗಳಂತೆ ನಮೂನೆ 19 ಮತ್ತು 19-ಎ ಹಾಗೂ ಪೆನಾಲ್ಟಿ ಬಾಂಡ್ ಪಡೆದು ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳುವುದು.

3. ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರಾತಿಗೆ ಸಂಬಂಧಿಸಿದಂತೆ ಸರ್ಕಾರವು ಪ್ರತ್ಯೇಕವಾಗಿ ಪರಿಶೀಲಿಸಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದು. ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ/ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

4. 2009–10ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸೇವಾನಿರತ ವೈದ್ಯರು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಾಧಿಕಾರಿಗಳು ಅದರಂತೆ ಕ್ರಮತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 693 ವೆಚ್ಚ-5 : 2008 ದಿನಾಂಕ: 31–05–2008 ರಲ್ಲಿ 5 ವರ್ಷಕ್ಕಿಂತ ಕಡಿಮೆ ಹಾಗೂ 3 ವರ್ಷ ಮೇಲ್ಪಟ್ಟು ಸರ್ಕಾರಿ ಸೇವೆ ಸಲ್ಲಿಸಿರುವ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿರುವ ವೈದ್ಯಾಧಿಕಾರಿಗಳಿಂದ ಪರಿಷ್ಕೃತ ಕರಾರು ಬಂಧ ಪತ್ರವನ್ನು ಪಡೆಯುವ ಷರತ್ತಿಗೊಳಪಟ್ಟು ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

6. ಸ್ನಾತಕೋತ್ತರ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಅರ್ಜಿಯ ಮೇಲಿನ ಅಂತಿಮ ತೀರ್ಮಾನಕ್ಕೆ ಈ ಆದೇಶವು ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 02 ಎಸ್‌ಆರ್‌ಎ 2008 ದಿನಾಂಕ:05–06–2008 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1).

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 86 ಹೆಚ್‌ಎಸ್‌ಹೆಚ್ 2009 (ಭಾಗ–2) ದಿನಾಂಕ: 30/06/2009 ಕ್ಕೆ ಅನುಬಂಧ

| ಕ್ರ ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 1 | ಡಾ: ಪ್ರಶಾಂತ್ ಹೆಚ್.ಕೆ. ಪ್ರಾಆಕೇಂದ್ರ, ಸಾತನೂರು, ಕನಕಪುರ ತಾ: ರಾಮನಗರ ಜಿಲ್ಲೆ | DCH | ಆದಿಚುಂಚನಗಿರಿ ಮೆಡಿಕಲ್ ಕಾಲೇಜ್, ಬೆಳ್ಳೂರು |
| 2 | ಡಾ: ರಂಗಸ್ವಾಮಿ ಹೆಚ್.ವಿ. ಜಿಲ್ಲಾ ಕ್ಷಯರೋಗಯ ನಿಯಂತ್ರಾಣಾಧಿಕಾರಿ ಜಿಲ್ಲಾ ಕ್ಷಯರೋಗ ನಿಯಂತ್ರಣ ಕೇಂದ್ರ, ತುಮಕೂರು | MD Com. Med | ಆದಿಚುಂಚನಗಿರಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಕಾಲೇಜ್, ಬೆಳ್ಳೂರು |
| 3 | ಡಾ: ಶ್ರೀಕಾಂತ್ ಎಸ್. ಪ್ರಾಆಕೇ. ಹಾರಮಘಟ್ಟ ಶಿವಮೊಗ್ಗ ಜಿಲ್ಲೆ | MD GM | ಆದಿಚುಂಚನಗಿರಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಕಾಲೇಜ್, ಬೆಳ್ಳೂರು |
| 4 | ಡಾ: ಮಂಜುನಾಥ ಪ್ರಸಾದ್, ಪ್ರಾ.ಆ.ಕೇಂದ್ರ, ರಿಪ್ಪನ್‌ಪೇಟೆ, ಶಿವಮೊಗ್ಗ | MS ENT | ಎ.ಜೆ. ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಮಂಗಳೂರು |
| 5 | ಡಾ: ಶಶಿಕಲಾ ಎಸ್. ಎಸ್.ಡಿ.ಎಸ್. ಟಿಬಿ ಮತ್ತು ಆರ್.ಜಿ.ಐ.ಸಿ.ಡಿ. ಬೆಂಗಳೂರು | MD Bio Chem | ಎ.ಜೆ. ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಮಂಗಳೂರು |
| 6 | ಡಾ: ಬಯಪ್ಪರೆಡ್ಡಿ, ಪ್ರಾ.ಆ.ಕೇಂದ್ರ, ಕೊಡಿಗೇನಹಳ್ಳಿ, ಮಧುಗಿರಿ ತಾ: ತುಮಕೂರು ಜಿಲ್ಲೆ | DMRD | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 7 | ಡಾ: ಭಾರತಿ ಅಂಜಗಿ, ನಿಯೋಜನೆ ಮೇಲೆ, ಕೃ.ಭಾ.ಜ.ನಿಗಮ ನಿಯಮಿತ, ಆಲಮಟ್ಟಿ–586201 | MS OBG | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 8 | ಡಾ: ಹೇಮಂತ್ ಎಸ್.ಎನ್. ಪ್ರಾ.ಆ.ಕೇಂದ್ರ, ಅಮ್ಮತೂರು, ಕುಣಿಗಲ್ ತಾ: ತುಮಕೂರು ಜಿಲ್ಲೆ | MS GS | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 9 | ಡಾ: ಮಂಜುಳ ಎಸ್.ಸಿ. ಪ್ರಾ.ಆ.ಕೇಂದ್ರ, ಉಲ್ಲಾಳು, ಬೆಂ.ನ. ಜಿಲ್ಲೆ | MD Phrma | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 10 | ಡಾ: ನಟರಾಜ್ ಬಿ. ಪ್ರಾ.ಆ.ಕೇಂದ್ರ, ಸಾಗರಕಟ್ಟೆ, ಮೈಸೂರು ಜಿಲ್ಲೆ | MD RD | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 11 | ಡಾ: ಪೂರ್ಣಿಮ ಸಿ. ಆ.ಕೇಂದ್ರ, ಭುವನೇಶ್ವರಿ ನಗರ, ಬೆಂ.ಮ.ನ.ಪಾ. ಬೆಂಗಳೂರು | MD Com. Med | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 12 | ಡಾ: ಪ್ರತಿಭಾ ಜೆ. ಪ್ರಾಆಕೇಂ. ಹೊಸೂರು , ಮೈಸೂರು ಜಿಲ್ಲೆ | MD Micro | ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು |
| 13 | ಡಾ: ಪ್ರಿಯ ಆರ್. ಪ್ರಾ.ಆ.ಕೇಂದ್ರ, ಕನಕವಾಡಿ, ದೊಡ್ಡಬಳ್ಳಾಪುರ ತಾ: ಬೆಂ. ಗ್ರಾ ಜಿಲ್ಲೆ | DGO | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 14 | ಡಾ: ರಮಣನ್ ವಿ. ಪ್ರಾ.ಆ.ಕೇಂದ್ರ, ಕೊನೇನಹಳ್ಳಿ, ದೊಡ್ಡಬಳ್ಳಾಪುರ ತಾ: ಬೆಂ. ಗ್ರಾ. ಜಿಲ್ಲೆ | MSGS | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 15 | ಡಾ: ಶಂಕರಪ್ಪ ಆರ್.ವಿ. ಶ್ರೀ ನರಸಿಂಹರಾಜ ಜಿಲ್ಲಾ ಆಸ್ಪತ್ರೆ, ಕೋಲಾರ | MD Anae | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 16 | ಡಾ: ಶಿವಣ್ಣಗೌಡ ಎಸ್ ಪಾಟೀಲ್, ಪ್ರಾಆಕೇ. ಅಮ್ಮಣಗಿ, ಹುಕ್ಕೇರಿ ತಾ;; ಚಿಕ್ಕೋಡಿ | MD GM | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |

| ಕ್ರ ಸಂ. | | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|---|
| 17 | ಡಾ: | ಶ್ರೀಧರ್ ಜಿ.<br>ಪ್ರಾಆಕೇಂ. ಕೆ.ಜಿ. ಹಳ್ಳಿ, ಬೆಂ. ನಗರ ಜಿಲ್ಲೆ | DVD | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 18 | ಡಾ: | ಶ್ರೀಧರ್ ಬಿ.ಟಿ.<br>ಪ್ರಾ.ಆ.ಕೇಂದ್ರ, ತಳಗವಾದಿ, ಮಳವಳ್ಳಿ ತಾ: ಮಂಡ್ಯ ಜಿಲ್ಲೆ | DOMS | ಬೆಂಗಳೂರು ಮೆಡಿಕಲ್ ಕಾಲೇಜು, ಬೆಂಗಳೂರು |
| 19 | ಡಾ: | ಶ್ರೀನಿವಾಸ.ಎನ್.<br>ಸ.ಆ.ಕೇಂದ್ರ, ಜೆ.ಮಲ್ಲಾಪುರ, ರಾಯಚೂರು ಜಿಲ್ಲೆ | DCH | ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು |
| 20 | ಡಾ: | ಸುಧಾ ಸಿ.<br>ಪ್ರಾ.ಆ.ಕೇಂದ್ರ, ಸಿಂಗಟಗೆರೆ, ಕಡೂರು ತಾ: ಚಿಕ್ಕಮಗಳೂರು | DLO | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 21 | ಡಾ: | ಸುಜಾತ.ಹೆಚ್ಎಸ್.<br>ಸ.ಆ.ಕೇಂದ್ರ, ಪಡುವಲಹಿಪ್ಪೆ, ಹೆಚ್.ಎನ್.ಪುರ ತಾ: ಹಾಸನ ಜಿಲ್ಲೆ | MD Phy | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 22 | ಡಾ: | ವೀಣಾ ಪಿ.ಎಸ್.<br>ಪ್ರಾ.ಆ.ಕೇಂದ್ರ, ಅಜಕಾರು, ಕಾರ್ಕಳ ತಾ: ಉಡುಪಿ ಜಿಲ್ಲೆ | DLO | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 23 | ಡಾ: | ಸಿ.ಎನ್. ಪ್ರಭಾವತಿ,<br>ಪ್ರಾಆಕೇಂ. ಚಿಕ್ಕಮದುವಾಡಿ, ಕನಕಪುರ ತಾ: ರಾಮನಗರ ಜಿಲ್ಲೆ | DGO | ಡಾ॥ ಬಿ.ಆರ್.ಅಂಬೇಡ್ಕರ್ ಮೆಡಿಕಲ್ ಕಾಲೇಜ್, ಬೆಂಗಳೂರು |
| 24 | ಡಾ: | ವೀಣಾ ಹೆಚ್.<br>ಪ್ರಾ.ಆ.ಕೇಂದ್ರ, ಗೂಳೂರು, ತುಮಕೂರು ತಾ: ಜಿಲ್ಲೆ | MD Com. Med | ಬಿ.ಆರ್.ಅಂಬೇಡ್ಕರ್ ಮೆಡಿಕಲ್ ಕಾಲೇಜು, ಬೆಂಗಳೂರು |
| 25 | ಡಾ: | ಭಗವಾನ್ ಬಿ.<br>ಸ.ಆ.ಕೇಂದ್ರ, ಕಮಲಾನಗರ, ಔರಾದ್ ಬಿ. ತಾ: ಬೀದರ್ ಜಿಲ್ಲೆ | MSGS | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್, ಮಂಗಳೂರು |
| 26 | ಡಾ: | ಶೋಭಾ ವಿ.<br>ಪ್ರಾ.ಆ.ಕೇಂದ್ರ, ಅಣ್ಣೀಹಳ್ಳಿ, ಕೋಲಾರ ತಾ; | MD Skin & VD | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್, ಮಂಗಳೂರು |
| 27 | ಡಾ: | ಲಲಿತಾ ಎಂ.<br>ಪ್ರಾ.ಆ.ಕೇಂದ್ರ, ಮಲ್ಲನಾಯಕಹಳ್ಳಿ, ಮುಳಬಾಗಿಲು ತಾ: ಕೋಲಾರ ಜಿಲ್ಲೆ | DCH | ಇಂದಿರಾಗಾಂಧಿ ಇನ್ಸ್ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ್, ಬೆಂಗಳೂರು |
| 28 | ಡಾ: | ಸುರೇಶ ಟಿ.ಎನ್.<br>ಜಿಲ್ಲಾ ಆಸ್ಪತ್ರೆ, ಮಂಡ್ಯ ಜಿಲ್ಲೆ | MD Pdea | ಇಂದಿರಾಗಾಂಧಿ ಇನ್ಸ್ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ, ಬೆಂಗಳೂರು |
| 29 | ಡಾ: | ಆನಂದಕುಮಾರ್ ಗುರುಪಾದಪ್ಪ,<br>ಸಾ.ಆ. ಆಳಂದ, ಗುಲ್ಬರ್ಗಾ ಜಿಲ್ಲೆ | MD Patho | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 30 | ಡಾ: | ಪ್ರವೀಣ ಕುಮಾರ್ ಕೆ.ಎಸ್.<br>ತಾ.ಆ. ರಾಣಿಬನ್ನೂರು, ಹಾವೇರಿ ಜಿಲ್ಲೆ | MS OBG | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 31 | ಡಾ: | ಗಿರೀಶ ಬಿ. ಸಂಗಮ,<br>ಪ್ರಾ.ಆ.ಘಟಕ, ಚಿತ್ರರಗಿ, ಹುನಗುಂದ ತಾ: ಬಾಗಲಕೋಟೆ ಜಿಲ್ಲೆ | MD GM | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 32 | ಡಾ: | ನಾಗರಾಜು ಎಸ್.<br>ಪ್ರಾ.ಆ.ಕೇಂದ್ರ, ಅರೆಮಲ್ಲಾಪುರ, ರಾಣಿಬೆನ್ನೂರು ತಾ: ಹಾವೇರಿ ಜಿಲ್ಲೆ | DA | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |

| ಕ್ರ ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|---|
| 33 | ಡಾ: | ಪ್ರಕಾಶ್ ಸಿ.<br>ಪ್ರಾಆಘ. ವಿದ್ಯಾನಗರ, ಶಿವಮೊಗ್ಗ ಜಿಲ್ಲೆ | D Ortho | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 34 | ಡಾ: | ಪ್ರೀತಿ ಜೆ.ಎಂ.<br>ನ.ಆ.ಕೇಂದ್ರ, ಉಜ್ಜಿನಪುರ, ಶಿವಮೊಗ್ಗ | MD Anae | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 35 | ಡಾ: | ರಘು ಜೆ.ಎನ್.<br>ಪ್ರಾ.ಆ.ಕೇಂದ್ರ, ಹೂವಿನಹಳ್ಳಿ ಕಾವಲು, ಹಾಸನ ಜಿಲ್ಲೆ | DPM | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 36 | ಡಾ: | ಶ್ರೀಕಾಂತ<br>ಪ್ರಾ.ಆ.ಕೇಂದ್ರ, ಬೆಳ್ವೆ, ಕುಂದಾಪುರ ತಾ: ಉಡುಪಿ ಜಿಲ್ಲೆ | DLO | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 37 | ಡಾ: | ಸುಬ್ರಾಯ್ ಹೆಚ್.<br>ತಾ.ಆ. ಭಟ್ಕಳ, ಉ.ಕ. ಜಿಲ್ಲೆ | MD Pead. | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 38 | ಡಾ: | ವಿಜಯಲಕ್ಷ್ಮಮ್ಮ ವಿ.<br>ಕುಟುಂಬ ಕಲ್ಯಾಣ, ಮಾಗಡಿ ರಸ್ತೆ, ಬೆಂ. | DGO | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 39 | ಡಾ: | ಚಿಕ್ಕಬೋರೆಗೌಡ,<br>ಪ್ರಾ.ಆ.ಕೇಂದ್ರ, ನಾರಾಯಣಪುರ, ಪಾಂಡವಪುರ ತಾ: ಮಂಡ್ಯ ಜಿಲ್ಲೆ | MS GS | ಕಿಮ್ಸ್, ಹುಬ್ಬಳ್ಳಿ |
| 40 | ಡಾ: | ಹರೀಶ್ ಬಿ.ಹೆಚ್.<br>ಪ್ರಾ.ಆ.ಕೇಂದ್ರ, ತೇರದಕುಪ್ಪ, ತುಮಕೂರು ಜಿಲ್ಲೆ | MS Opthal | ಕಿಮ್ಸ್, ಹುಬ್ಬಳ್ಳಿ |
| 41 | ಡಾ: | ಹೇಮಂತ ನಂದಕುಮಾರ ಭಟ್,<br>ಪ್ರಾ.ಆ.ಘಟಕ, ಚವತ್ತಿ, ಯಲ್ಲಾಪುರ, ಉ.ಕ. ಜಿಲ್ಲೆ | DA | ಕಿಮ್ಸ್, ಹುಬ್ಬಳ್ಳಿ |
| 42 | ಡಾ: | ಜಯಲಕ್ಷ್ಮೀ ಬಿ.ಎನ್.<br>ಪ್ರಾ.ಆ.ಕೇಂದ್ರ, ಕಳಸಾಪುರ, ಚಿಕ್ಕಮಗಳೂರು ಜಿಲ್ಲೆ | DGO | ಕಿಮ್ಸ್, ಹುಬ್ಬಳ್ಳಿ |
| 43 | ಡಾ: | ಮಹೇಶ್,<br>ಪ್ರಾ.ಆ.ಕೇಂದ್ರ, ಉದ್ಬೂರು, ಮೈಸೂರು ತಾ: ಜಿಲ್ಲೆ | MS GS | ಕಿಮ್ಸ್, ಹುಬ್ಬಳ್ಳಿ |
| 44 | ಡಾ: | ಮಂಜುನಾಥ ಎಸ್.ಇ.<br>ಪ್ರಾ.ಆ.ಕೇಂದ್ರ, ಮೇಗರವಳ್ಳಿ, ಶಿವಮೊಗ್ಗ ಜಿಲ್ಲೆ | D Ortho | ಕಿಮ್ಸ್, ಹುಬ್ಬಳ್ಳಿ |
| 45 | ಡಾ: | ನಾರಾಯಣಸ್ವಾಮಿ ಆರ್.ಆರ್.<br>ಪ್ರಾ.ಆ.ಕೇಂದ್ರ, ಕೋಡ್ಲಾಪುರ, ಮಧುಗಿರಿ ತಾ: ತುಮಕೂರು ಜಿಲ್ಲೆ | MS GS | ಕಿಮ್ಸ್, ಹುಬ್ಬಳ್ಳಿ |
| 46 | ಡಾ: | ಪ್ರಗತಿ ಜೆ. ಭೋರಗಾಂವ್,<br>ಪ್ರಾ.ಆ.ಕೇಂದ್ರ, ನಂದಗಡ, ಖಾನಾಪುರ ತಾ: ಬೆಳಗಾಂ ಜಿಲ್ಲೆ | DOMS | ಕಿಮ್ಸ್, ಹುಬ್ಬಳ್ಳಿ |
| 47 | ಡಾ: | ವಿಜಯಕುಮಾರ್ ರಾವ್ ಎಸ್.ಆರ್.ಡಿ.<br>ಪ್ರಾ.ಆ.ಕೇಂದ್ರ, ಜೆ.ಜಿ.ಹಳ್ಳಿ, ಚಿತ್ರದುರ್ಗ ಜಿಲ್ಲೆ | DVD | ಕಿಮ್ಸ್, ಹುಬ್ಬಳ್ಳಿ |
| 48 | ಡಾ: | ಶಾಂತಗೌಡ ಪಿ.ಕೆ.<br>ವೈದ್ಯಾಧಿಕಾರಿ, ಪ್ರಾಆಕೇ. ಲಿಂಗನೂರು, ಬಾಗಲಕೋಟೆ ಜಿಲ್ಲೆ | D Ortho | ಕಿಮ್ಸ್, ಹುಬ್ಬಳ್ಳಿ |

14. The user agency has to pay the lease rent as fixed by the Government at the time of sanction and any subsequent orders in this regard.
15. Karnataka Forest Act 1963 and Rules 1969 will be applicable for any violation.
16. Compensatory afforestation shall be raised at the cost of user agency over equivalent non-forest land at the rate of prevailing at the time of approval(at present it is Rs. 84,000/- per ha.).
17. Only minimum number of trees shall be cut based on actual requirement of the project and user agency shall pay the extraction and transportation charges of trees estimated by the Deputy Conservator of Forests from the proposed land if extracted.
18. The user agency shall pay the NPV of the diverted forest land and the additional amount of the NPV if any due as per the orders of the Hon`ble Supreme Court dated 28.03.2008 and 09.05.2008 in IA Nos.826 in 566 with related IA`s in Writ Petition(Civil) No.202/1995 shall be realised from the user agency and transferred to Ad-hoc CAMPA in account number CA-1578 of Corporation Bank, Block-II, CGO Complex, Phase-I, Lodhi Road, New Delhi-110 003 under intimation to Government of India.
19. The user agency has to pay the Net Present Value as per the Government Notification dated 17.1.2004( at Rs. 5.80 ha. lakhs to Rs. 9.20 lakhs per ha. depending upon the quantity and density of the land).
20. The user agency has to abide by all the terms and conditions as laid by Government of India as per their guidelines dated 14/05/2004.
21. The funds received from the user agency towards CA, lease rent and NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 with an intimation to Government of India.
22. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By order and in the name of the Governor of Karnataka

P.R.502

**P.R. KALAVATHI**

Under Secretary to Government,

Forest, Ecology and Environment Department.

## ಶಿಕ್ಷಣ ಸಚಿವಾಲಯ

**ವಿಷಯ :** ಕೊಳ್ಳೇಗಾಲದಲ್ಲಿ ಗಡಿ ಕನ್ನಡ ಭವನ ನಿರ್ಮಾಣ ಮಾಡಲು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಆಟದ ಮೈದಾನದ ಜಮೀನನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ರವರ ಪತ್ರ ಸಂಖ್ಯೆ: ಕಾಶಿಇ 42–ಯೋಜನೆ–1996–97, ದಿನಾಂಕ 3–3–2009.

**ಪ್ರಸ್ತಾವನೆ :**

1) ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು, ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲದಲ್ಲಿ 'ಗಡಿ ಕನ್ನಡ ಭವನ' ನಿರ್ಮಿಸಲು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸೇರಿರುವ ಜಮೀನಿನಲ್ಲಿ 1.20 ಎಕರೆ ಜಮೀನನ್ನು ಒದಗಿಸುವಂತೆ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಚಾಮರಾಜನಗರ ರವರು ಕೋರಿರುವುದಾಗಿ ತಿಳಿಸಿ, ಸದರಿ ಜಮೀನನ್ನು ಮುಂದೆ ಕಾಲೇಜಿನ ಎಲ್ಲಾ ಚಟುವಟಿಕೆಗಳಿಗೆ ಉಚಿತವಾಗಿ ಸದರಿ ಭವನವನ್ನು ಒದಗಿಸಬೇಕೆಂಬ ಷರತ್ತನ್ನು ವಿಧಿಸಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಹಸ್ತಾಂತರಿಸಬಹುದೆಂದು ಅಭಿಪ್ರಾಯಿಸಿ, ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 73 ಯೋಸಕ 2009, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2009**
**(ಇಡಿ: 53 ಸ್ವೀಮರ (ಯುನಿಕ್) 2009, ದಿನಾಂಕ 31–3–2009)**

3) ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲದಲ್ಲಿ, 'ಗಡಿ ಕನ್ನಡ ಭವನ' ನಿರ್ಮಿಸಲು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸೇರಿರುವ ಜಮೀನಿನಲ್ಲಿ 1.20 ಎಕರೆ ಜಮೀನನ್ನು ಮುಂದೆ ಕಾಲೇಜಿನ ಎಲ್ಲಾ ಚಟುವಟಿಕೆಗಳಿಗೆ ಉಚಿತವಾಗಿ ಸದರಿ ಭವನವನ್ನು ಒದಗಿಸಬೇಕೆಂಬ ಷರತ್ತನ್ನು ವಿಧಿಸಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಹಸ್ತಾಂತರಿಸಲು ನಿಯಮಾನುಸಾರ ಕ್ರಮ ಕೈಗೊಳ್ಳಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1149

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಕೆ.ಎಂ. ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಪ್ರಭಾರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಜರುಗಿಸುವ ಕುರಿತು – ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :**
1. ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: Compt:UPLOK/BD-934/2007/ARE-6, ದಿನಾಂಕ 1–1–2009.
2. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ಕಛೇರಿ ಪತ್ರ ಸಂಖ್ಯೆ ಗಭೂಇ:ಸಿಬ್ಬಂದಿ:ಅ–3:ಕೆಎಂಎನ್:ಲೋಕ್:2008–09,4249, ದಿನಾಂಕ 21–2–2009.

**ಪ್ರಸ್ತಾವನೆ :**

ಶ್ರೀ ಕೆ.ಎಂ. ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರು ಈ ಹಿಂದೆ ಹಿರಿಯ ಭೂವಿಜ್ಞಾನಿ (ಪ್ರಭಾರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಶ್ರೀ ಲಿಯೋ ಆರೋಜ, ತೀರ್ಥಹಳ್ಳಿ ಇವರು ತೀರ್ಥಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಮೇಲಿನಕುರುವಳ್ಳಿ ಗ್ರಾಮದ ಸರ್ವೆ ನಂ. 38, 75 ಹಾಗೂ ಬುಕ್ಲಾಪುರದ ಗ್ರಾಮದ ಸರ್ವೆ ನಂ. 64ರ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಅಕ್ರಮ ಗಣಿಗಾರಿಕೆ ಬಗ್ಗೆ ಮಾನ್ಯ ಲೋಕಾಯುಕ್ತರಿಗೆ ದಿನಾಂಕ 1–1–2009 ರಂದು ದೂರನ್ನು ದಾಖಲಿಸಿದ್ದು, ಅಂತೆಯೇ ಉಪ ಲೋಕಾಯುಕ್ತರು ತನಿಖೆಯನ್ನು ನಡೆಸಿದ್ದು, ಆರೋಪವು ಮೇಲ್ನೋಟಕ್ಕೆ ಇವರ ವಿರುದ್ಧ ಸಾಬೀತಾಗಿರುವುದರಿಂದ ಹಾಗೂ ಸದರಿ ಅಧಿಕಾರಿಯವರ ವರ್ತನೆಯು ಸರ್ಕಾರಿ ನೌಕರರಿಗೆ ಸಲ್ಲದ ರೀತಿಯ ವರ್ತನೆಯಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14(ಎ)ರ ಮೇರೆಗೆ ಕಠಿಣ ದಂಡನೆಯನ್ನು ವಿಧಿಸಲು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸುವಂತೆ ಹಾಗೂ ಈ ರೀತಿ ನಡೆಸಲಾಗುವ ವಿಚಾರಣೆಯನ್ನು ಇದೇ ನಿಯಮಾವಳಿಗಳ ನಿಯಮ 14(ಎ)ರ ಪ್ರಕಾರ ಮಾನ್ಯ ಲೋಕಾಯುಕ್ತರವರ ಕಛೇರಿಗೆ ವಹಿಸಿಕೊಡುವಂತೆ ಮಾನ್ಯ ಉಪ ಲೋಕಾಯುಕ್ತರು ಕೋರಿರುತ್ತಾರೆ. ಓದಲಾದ (1)ರ ಮೂಲಕ ಹಾಗೂ ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಸೆಕ್ಷನ್ 12(3)ರ ಪ್ರಕಾರ ಓದಲಾದ (2)ರ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 22 ಎಂಜಿಎಸ್ 2009, ಬೆಂಗಳೂರು, ದಿನಾಂಕ: 9ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಶ್ರೀ ಕೆ.ಎಂ. ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರ ಪ್ರಕಾರ ವಿಚಾರಣೆಯನ್ನು ನಡೆಸಲು ಸರ್ಕಾರದ ಅನುಮತಿಯನ್ನು ನೀಡಿದೆ.

ಈ ಪ್ರಕರಣವನ್ನು/ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14(A)ರ ಪ್ರಕಾರ ಕರ್ನಾಟಕ ಲೋಕಾಯುಕ್ತರ ಕಛೇರಿಗೆ ಸರ್ಕಾರವು ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1147

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** 1. ಸಹಕಾರ ಸಂಘಗಳ ನಿಬಂಧಕರ ಆದೇಶ ಸಂಖ್ಯೆ: ಎಲ್‌ಡಿಬಿ–2/55 ವಾಮಸ/2008–09, ದಿನಾಂಕ 30–9–2008.

2. ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು, ಇವರ ಪತ್ರ ಸಂಖ್ಯೆ: ಎಲ್‌ಡಿಬಿ–2/55/ವಾಮಸ/ 2008–09, ದಿನಾಂಕ 17–2–2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮಾರ್ಚ್ 2009ರೊಳಗೆ ನಡೆಸುವಂತೆ ಅನುಮತಿ ನೀಡಲಾಗಿದೆ. ಈಗ ಕಾಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು 2006–07ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯು ಇನ್ನೂ ಪ್ರಾಪ್ತವಾಗದಿರುವುದರಿಂದ ಮತ್ತು 2009ರ ಮಾರ್ಚ್ ತಿಂಗಳಲ್ಲಿ ಬ್ಯಾಂಕಿನ ಸಿಬ್ಬಂದಿ ವರ್ಗದವರು ಹಾಗೂ ಪ್ರಾಥಮಿಕ ಬ್ಯಾಂಕುಗಳು ವಸೂಲಿ ಕಾರ್ಯದಲ್ಲಿ ನಿರತವಾಗಿರುವುದರಿಂದ ಮಾರ್ಚ್ ತಿಂಗಳ ಅಂತ್ಯದಲ್ಲಿ 2007–08ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಅನಾನುಕೂಲವಿರುವುದರಿಂದ 2007–08 ಮತ್ತು 2008–09ನೇ ಸಾಲುಗಳ ಮಹಾಸಭೆಯನ್ನು ಒಟ್ಟಿಗೆ ನಡೆಸುವುದು ಬ್ಯಾಂಕಿನ ಹಿತದೃಷ್ಟಿಯಿಂದ ಅನುಕೂಲವಾಗುವುದರಿಂದ ಸೆಪ್ಟಂಬರ್ 2009ರ ಅಂತ್ಯದವರೆಗೆ ಕಾಲಾವಕಾಶ ನೀಡುವಂತೆ ಅನುಮತಿ ಕೋರಿದ್ದು ಬ್ಯಾಂಕಿನ ಪ್ರಸ್ತಾವೆಯನ್ನು ಪರಿಗಣಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 48 ಸಿಎಲ್‌ಎಂ 2009, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 30–9–2008 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಸಂಸ್ಥೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1) ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30–9–2009 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1150

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## PUBLIC ENTERPRISES SECRETARIAT

**Sub :** Institution of "ANNUAL CHIEF MINISTER'S RATNA AWARDS" to the five best performing meritorious State Public Sector Enterprises.

**Read :** G.O. No. DPE 80 SPU 2008, dated: 25-11-2008.

**Preamble:**

The Department of Public Enterprises, Government of India has introduced "PRIME MINISTER'S RATNA AWARD" for the best performing Public Sector Undertakings of Government of India. This award

is instituted consciously by Government of India with a view to inculcate the habit of competition among Public Sector Undertakings and Private Sectors and ultimately to achieve excellence and best performances. This "RATNA" award has created awareness and competitiveness not only among Public Sector Undertakings but also among Private Sector Undertakings. The introduction of this award has achieved amazing results with unimaginable profits and created huge employment opportunities.

With a view to improve and inculcate competitiveness among themselves and to improve core potential and performance of Karnataka State Public Sectors, similarly it is proposed to institute five "ANNUAL CHIEF MINISTERS RATNA AWARDS" for the best performing State Public Enterprises and befitting citations to the Chief Executive Officers of concerned Public Enterprises. Therefore, it is proposed to introduced a award of Rs. 99,999/- each for the five best performing State Public Enterprises.

**Government Order No. DPE 23 SPU 2009, Bangalore, Dated 4th April 2009**

Government of Karnataka has decided to institute five "ANNUAL CHIEF MINISTER'S RATNA AWARDS" to the five best performing meritorious State Public Sector Enterprises and befitting citations to the Chief Executive Officers of concerned Public Sector Undertakings. Each award carries a citation and Rs. 99,999/- (Rupees Ninety nine thousand nine hundred ninety nine only).

This expenditure is debited to the head of account 3451-00-091-0-01.

By order and in the name of the Governor of Karnataka,

PR. 1154

**B. GANGADHAR**

Under Secretary to Government, Department of Public Enterprises

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀಮತಿ ಕೆ. ಪದ್ಮಿನಿದೇವಿ, ಹಿರಿಯ ಸಹಾಯಕಿ, ಇವರ 2007–08ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಾಗಿರುವ ಪ್ರತಿಕೂಲ ಷರಾದ ಬಗ್ಗೆ.

**ಓದಲಾಗಿದೆ :**

1. ದಿನಾಂಕ 21–11–2008 ಸಂಖ್ಯೆ: ಸಿಆಸುಇ 12 ವಾರವ 2008ರ ತಿಳುವಳಿಕೆ ಪತ್ರ.
2. ದಿನಾಂಕ 30–1–2009ರ ಶ್ರೀಮತಿ ಕೆ. ಪದ್ಮಿನಿದೇವಿ, ಹಿರಿಯ ಸಹಾಯಕಿ, ಜಲಸಂಪನ್ಮೂಲ ಇಲಾಖೆ (ವಿಬ್ಯಾಯೋ) ಇವರ ಮನವಿ ಪತ್ರ.
3. ದಿನಾಂಕ 20–2–2009 ಸಂಖ್ಯೆ: ಸಿಆಸುಇ 12 ವಾರವ 2008ರ ಅರೆ ಸರ್ಕಾರಿ ಪತ್ರಗಳು.
4. ದಿ: 2–3–2009 ಅ.ಟಿ. ಸಂಖ್ಯೆ: ಜಸಂಇ 31 (ವಿಬ್ಯಾಯೋ) 2009.
5. ದಿ: 3–3–2009 ಅ.ಟಿ. ಸಂಖ್ಯೆ: ಜಸಂಇ 316 ಉಕಾ (ಕೆಬಿಎನ್) 2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ 1ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಶ್ರೀಮತಿ ಕೆ. ಪದ್ಮಿನಿದೇವಿ, ಹಿರಿಯ ಸಹಾಯಕಿ, ಜಲಸಂಪನ್ಮೂಲ ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯ, ಇವರ 2007–08ನೇ ಸಾಲಿನ ಕಾರ್ಯನಿರ್ವಹಣಾ ವರದಿಯ ಭಾಗ–4ರಲ್ಲಿ ಪುನರಾವಲೋಕನ ಪ್ರಾಧಿಕಾರ ಹಾಗೂ ಭಾಗ–5ರಲ್ಲಿ ಅಂಗೀಕಾರ ಪ್ರಾಧಿಕಾರದಿಂದ ದಾಖಲಾಗಿರುವ ಈ ಕೆಳಕಂಡ ಪ್ರತಿಕೂಲ ಷರಾವನ್ನು ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು 2000ರ ನಿಯಮ 9 (2)ರಂತೆ ಸದರಿ ನೌಕರರಿಗೆ ತಿಳಿಸಲಾಗಿತ್ತು.

**"ಸ್ವಯಂ ಮೌಲ್ಯಮಾಪನ ಭಾಗ–2ರ "ಅ" ಭಾಗ 3ರ ವರದಿಯ ಆ1, ಆ2, ಆ3 ಮತ್ತು ಆ4 ಅನ್ನು ಬಿಟ್ಟು ಮಿಕ್ಕವುಗಳನ್ನು ಒಪ್ಪಿರುತ್ತೇನೆ".**

1) ಕಚೇರಿಯ ಸಮಯದಲ್ಲಿ ಪೂರ್ಣ ಲಭ್ಯವಿರುವುದಿಲ್ಲ.
2) ವಿಷಯ ನಿರ್ವಾಹಕರ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲ.
3) ಹೆಚ್ಚಿನ ಸಮಯವನ್ನು Extra curricular activities" ನಲ್ಲಿ ವ್ಯಹಿಸುತ್ತಿದ್ದಾರೆ.

ಭಾಗ–5 ರಲ್ಲಿ ಅಂಗೀಕಾರ ಪ್ರಾಧಿಕಾರ ಈ ಕೆಳಕಂಡ ಪ್ರತಿಕೂಲ ಷರಾಗಳು ನಮೂದಾಗಿರುತ್ತವೆ.

"The remarks of the reviewing authority is agreed upon, the official should dedicate more time in office work".

ಮೇಲೆ ಓದಲಾದ ಕ್ರಮಸಂಖ್ಯೆ–2ರ ಮನವಿಯಲ್ಲಿ ಸದರಿ ನೌಕರರು ಪುನರಾವಲೋಕನ ಮತ್ತು ಅಂಗೀಕಾರ ಮಾಡಿರುವ ಪ್ರಾಧಿಕಾರಿಗಳು ನಮೂದಿಸಿರುವ ಪ್ರತಿಕೂಲ ಷರಾಗಳು ಸರಿಯಿಲ್ಲವೆಂದು ತಿಳಿಸುತ್ತಾ, ಅದಕ್ಕೆ ತಮ್ಮದೇ

ಕಾರಣಗಳನ್ನು ನೀಡುತ್ತಾ, ಉತ್ತಮವಾಗಿ ಕರ್ತವ್ಯ ನಿರ್ವಹಿಸುವ ಸಿಬ್ಬಂದಿಗೆ ಮಾನಸಿಕ ಕಿರುಕುಳ ನೀಡಬೇಕೆಂಬ ದುರುದ್ದೇಶದಿಂದಲೇ ನೀಡಲಾದ ಈ ಷರಾದಿಂದ ತಮ್ಮನ್ನು ಮುಕ್ತಗೊಳಿಸಬೇಕೆಂದು ಕೋರಿರುತ್ತಾರೆ.

ಸದರಿ ಪ್ರಕರಣದ ಆಪಾದಿತ ನೌಕರರಾದ ಶ್ರೀಮತಿ ಕೆ. ಪದ್ಮಿನಿದೇವಿ, ಹಿರಿಯ ಸಹಾಯಕಿ, ಇವರ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಸಲ್ಲಿಸಿರುವ ಸಮಜಾಯಿಷಿಗೆ ಸಂಬಂಧಿಸಿದಂತೆ ಅಂಗೀಕಾರ ಮತ್ತು ಪುನರಾವಲೋಕನ ಪ್ರಾಧಿಕಾರದ ಅಭಿಪ್ರಾಯವನ್ನು ದಿ: 20–2–2009ರ ಉಲ್ಲೇಖಿತ 3ರ ಅರೆ ಸರ್ಕಾರಿ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: 4ರ ಅನಧಿಕೃತ ಟಿಪ್ಪಣಿಯಲ್ಲಿ ಪ್ರಕರಣದ ಪುನರಾವಲೋಕನ ಪ್ರಾಧಿಕಾರವು ತಮ್ಮ ಅಭಿಪ್ರಾಯವನ್ನು ನೀಡಿದ್ದು, ಚೆನ್ನಾಗಿ ಕರ್ತವ್ಯ ನಿರ್ವಹಿಸುವ ಸಿಬ್ಬಂದಿಗೆ ಮಾನಸಿಕ ಕಿರುಕುಳ ನೀಡಬೇಕೆಂಬ ದುರುದ್ದೇಶದಿಂದ ಕೂಡಿದೆ ಎಂದು ಮಾಡಿರುವ ಆರೋಪವನ್ನು ತನಿಖೆಗೊಳಪಡಿಸುವುದು ಅಗತ್ಯವಾಗಿದೆ ಎಂದು ತಮ್ಮ ಅಭಿಪ್ರಾಯವನ್ನು ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 5ರ ಅರೆ ಸರ್ಕಾರಿ ಪತ್ರದಲ್ಲಿ ಅಂಗೀಕಾರ ಪ್ರಾಧಿಕಾರವು ಪುನರಾವಲೋಕನ ಪ್ರಾಧಿಕಾರ ನೀಡಿರುವ ಅಭಿಪ್ರಾಯವನ್ನು ಗಮನಿಸಿ ಸದರಿ ನೌಕರರಿಗೆ ಸೂಕ್ತ ಎಚ್ಚರಿಕೆ ನೀಡಬಹುದಾಗಿದೆ ಎಂದು ಹಾಗೂ 2008–09ನೇ ಸಾಲಿನ ಕಾರ್ಯನಿರ್ವಹಣಾ ವರದಿಯನ್ನು ವಿಮರ್ಶೆ ಮಾಡಿ ಮುಂದಿನ ಕ್ರಮ ಜರುಗಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ವಾರವ 2008, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಾವಳಿಗಳು 2000ರ ನಿಯಮ 10(2) ರನ್ವಯ ಶ್ರೀಮತಿ ಕೆ. ಪದ್ಮಿನಿದೇವಿ, ಹಿರಿಯ ಸಹಾಯಕಿ, ಜಲಸಂಪನ್ಮೂಲ ಇಲಾಖೆ (ವಿಬ್ಯಾಯೋ) ಇವರ 2007–08ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ಪುನರಾವಲೋಕನ ಪ್ರಾಧಿಕಾರ ಮತ್ತು ಅಂಗೀಕಾರ ಪ್ರಾಧಿಕಾರ ದಾಖಲಿಸಿದ ಪ್ರತಿಕೂಲ ಷರಾ ಮುಕ್ತಾಯಗೊಳಿಸುವ ಬಗ್ಗೆ ಅವರ ಮೇಲ್ಮನವಿಯನ್ನು ತಿರಸ್ಕರಿಸುತ್ತಾ, ಸದರಿ ಷರಾವನ್ನು ದೃಢೀಕರಿಸಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1156

**ಜಾಯ್ಸ್ ಸುರೇಂದ್ರ**
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ)

## COMMERCE AND INDUSTRIES SECRETARIAT

**Subject:** Project proposal of M/s Rubber Marketing and Processing Co-operative Ltd., to establish a “Rubber Park for Rubber Processing Industries” in Nanjanagud Taluk, Mysore District - Approval for- Orders reg.

**Read:**
1. Proceedings of the 14th State High Level Clearance Committee [SHLCC] meeting held on 17.03.2008.
2. Proceedings of the 16th State High Level Clearance Committee [SHLCC] meeting held on 19.11.2008.

**Preamble:**

The project proposal of M/s Rubber Marketing and Processing Co-operative Ltd., to establish a “Rubber Park for Rubber Processing Industries” with an investment of Rs.137.00 crores, in 301-37 acres of land, at Banur Village, Nanjangud Taluk, Mysore District was discussed in the 14th SHLCC meeting held on 17.3.2008.

In the 14th SHLCC meeting, it is noticed that the financial tie-ups with financial institutions and Government agencies was not secured. Hence it was deferred.

Now, the Government agencies like NCDC and Federal Bank Ltd. have agreed to finance the project after obtaining the approval of GoK.

In the proposal submitted before the 16th State High Level Clearance Committee meeting [SHLCC] held on 19.11.2008, the M/s Rubber Marketing and Processing Co-operative Ltd. had requested

for various Infrastructure facilities from the Government. The State High Level Clearance Committee, after detailed discussion of the project proposal of the said Company, vide the proceedings read above (2), has recommended for approval of the project, to provide infrastructural facilities.

Government has examined the recommendations made by the State High Level Clearance Committee in its 16th Meeting held on 19.11.2008 in all aspects. Hence the following order.

**Government order No: CI 6 SPI 2009, Bangalore, dated: 10th February 2009**

In the circumstances explained above, Government is pleased to accord approval to M/s Rubber Marketing and Processing Co-operative Ltd., to establish a "Rubber Park for Rubber Processing Industries" with an investment of Rs.137.00 crores, in 301-37 acres of land, at Chinnamballi, Kamahalli, Hadya and Banur Villages of Nanjangud Taluk, Mysore District, with the following infrastructural facilities:-

**INFRASTRUCTURE FACILITIES:**

**LAND:**

The Deputy Commissioner to permit the company to purchase 301-37 acres of land u/s 109 of KLR Act from the law full land owners of Sy.Nos. 119/1 to 165/3 in Chinnamballi Village, Sy.No.15 to 148/1 of Kamahalli Village, Sy.22 to 100 of Hadya Village and Sy.No.25/2 to 30/1 of Banur Village, Nanjangud Taluk, Mysore District and to convert the same for industrial use.

**WATER:**

10 MLD to be met with rain water harvesting, water recycling and borewells. Unit to minimize the usage of water and shall establish structure/facility for rainwater harvesting and groundwater recharge and also to conduct an annual 'Water Audit'.

**POWER:**

20 MW to be serviced by CESCOM.

**INCENTIVES & CONCESSIONS:**

Not eligible for incentives and concessions.

**ENVIRONMENT:**

KSPCB to issue CFE as per their norms. The company shall obtain environmental clearance from State and MOEF, GoI before commencement of work.

**EMPLOYMENT:**

Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**VENDOR DEVELOPMENT:**

Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**SOCIAL INFRASTRUCTURE DEVELOPMENT:**

The Company is advised to take up social infrastructure development projects in the vicinity of proposed location of the unit as per R&R policy 2007 (GoI). A copy of such projects shall be sent to the Government.

**OTHERS:**

The promoter shall take all statutory and other necessary clearances and shall submit milestones / progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the Governor of Karnataka

P.R.683

**APARNA PAVATE**

Desk Officer (Technical Cell), Commerce & Industries Department

**Subject:** Proposal of M/s Ind – Barath Power establish a "Thermal Power Plant" in Uttara Kannada District – Acquisition of part of the land required for the project by KIADB - Approval for- Orders reg.

**Read:**
1. Proceedings of the 8th State High Level Clearance Committee [SHLCC] meeting held on 23.2.2007.
2. G.O. No. CI 163 SPI 2007 dated 14.11.2007.
3. Proceedings of the 15th State High Level Clearance Committee [SHLCC] meeting held on 21.8.2008.
4. G.O. No. CI 318 SPI 2008 dated 19.12.2008.
5. Proceedings of the 16th State High Level Clearance Committee [SHLCC] meeting held on 19.11.2008.

**Preamble:**

The project proposal of M/s Ind – Barath Power (Karwar) Pvt. Ltd. to establish a "Thermal Power Plant" with an investment of Rs.840.00 Crores, in 200 acres of land, at Sy.Nos.282/1, 281, 280/2B, 280/1+2A of Hotegali Village and Sy.Nos.284, 285, 286 & 287 of Hankon Village, Karwar Taluk, Uttar Kannada District, was approved in the 8th State High Level Clearance Committee [SHLCC] meeting held on 27.02.2007 conveying the Deputy Commissioner, Uttar Kannada District to permit company to purchase 200 acres of land in the above Sy.Nos. u/s 109 of KLR Act and conversion of the same for industrial purpose thereafter. Accordingly, Government Order read above (2) was issued.

Subsequently, the company's revised proposal for enhancement of installed capacity of the power plant from "300 MW to 450 MW" and the project cost from Rs.840.00 crores to Rs.1800.00 crores was approved in the 15th SHLCC meeting held on 21.8.2008. Accordingly G.O. read above (4) was issued.

Now, the company has informed that, they have obtained permission from the Government u/s 109 of KLR Act and purchased 162 acres of private land. The balance land of 37 acres 38 guntas 11 cents required for the project falls between the purchased land area and the company is unable to purchase the said land due to exorbitant demand by the landowners. Therefore, they have requested KIADB to acquire and allot the said land of 37 acres 38 guntas 11 cents.

KIADB has informed that the said land is so far not been acquired by KIADB and there is no objection from the Board for acquiring the same for the project.

The State High Level Clearance Committee, after detailed discussion of the proposal of the said Company, vide the proceedings read above (5), has recommended for approval of the project.

Government has examined the recommendations made by the State High Level Clearance Committee in its 16th Meeting held on 19.11.2008 in all aspects. Hence the following order.

**Government order No: CI 318 SPI 2008, Bangalore dated: 11th February 2009**

In the circumstances explained above, Government is pleased to accord approval to M/s Ind-Barath Power (Karwar) Pvt. Ltd. to acquire the part of the land required for the project through KIADB.

KIADB to acquire 37 acres 18 guntas 11 cents of land at Sy.Nos. 125, 124K, 127, 141/1, 141/2, 150, 153, 154, 188/2, 182, 187/2, 167/2, 167/4, 188/1, 186/2, 186/3, 187/1, 181, 184/1,2, 184/5,6,

189/1,2, 183/2, 184/7, 144/4, 145/1, 144/3, 145/2 & 183/1 of Hankon Village, Karwar Taluk, Uttar Kannada District for the project.

This approval is valid for a period of two years from the date of issue.

By Order and in the name of the Governor of Karnataka

P.R.684

**APARNA PAVATE**

Desk Officer (Technical Cell), Commerce & Industries Department

**Subject**: Project proposal of M/s CF Biotec Ltd., to establish "Fuel Ethanol, Bio Diesel with 9 MW Power Generation Plant" by using Sweet Sorghum, Safflower and Jatropha" at Sogal Village, Saudatti Taluk, Belgaum District - Approval for- Orders reg.

**Read:** Proceedings of the 15th State High Level Clearance Committee [SHLCC] meeting held on 21.8.2008.

**Preamble:**

M/s CF Biotec Ltd., a private limited company, has proposed to establish "Fuel Ethanol, Bio Diesel with 9 MW Power Generation Plant" by using Sweet Sorghum, Safflower and Jatropha" at Sogal Village, Saudatti Taluk, Belgaum District with an investment of Rs.122.48 Crores. Upon development, this Project is expected to provide employment to 200 persons.

In the proposal submitted before the 15th State High Level Clearance Committee meeting [SHLCC] held on 21.8.2008, the Company had requested for various Infrastructure facilities as well as incentives and concessions as envisaged in the New Industrial Policy 2006-11 from the Government. The State High Level Clearance Committee, after detailed discussion of the project proposal of the said Company, vide the proceedings read above, has recommended for approval of the project, to provide infrastructural facilities and to extend incentives & concessions as envisaged in the Industrial Policy of the State Government 2006-11.

Government has examined the recommendations made by the State High Level Clearance Committee in its 15th Meeting held on 21.8.2008 in all aspects. Hence the following order.

**Government order No: CI 314 SPI 2008, Bangalore Dated: 19th December 2008**

In the circumstances explained above, Government is pleased to accord approval to M/s CF Biotec Ltd., to establish "Fuel Ethanol, Bio Diesel with 9 MW Power Generation Plant" by using Sweet Sorghum, Safflower and Jatropha" at Sogal Village, Saudatti Taluk, Belgaum District with an investment of Rs.122.48 Crores and to provide employment to 200 persons with the following infrastructural facilities, incentives and concessions:-

**INFRASTRUCTURE FACILITIES:**

**LAND:**

The Deputy Commissioner, Belgaum District, to permit the company to purchase 56 acres of land for the project U/s 109 of KLR Act in Sy. Nos. 247, 250/1.H, 250/1 I and 252/1 of Sogal Village, Saudatti Taluk, Belgaum District and conversion of the land for industrial purposes.

**WATER:**

Water Resources Department to permit the company to draw 19.10 lakh lpd of water from down stream of Malaprabha river, subject to availability. The company shall adopt rainwater harvesting and water recycling.

**POWER:**

The Company has to enter into a PPA with HESCOM on mutually agreed terms and conditions and tariff rate as determined by KERC for supply of 7000 KVA.

**INCENTIVES & CONCESSIONS:**

As per New Industrial Policy 2006-2011.

**ENVIRONMENT:**

KSPCB to issue CFE as per their norms. The company shall obtain environmental clearance from State. No civil works shall commence prior to obtaining ECC.

**EMPLOYMENT:**

Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**VENDOR DEVELOPMENT:**

Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**SOCIAL INFRASTRUCTURE DEVELOPMENT:**

The Company is advised to take up social infrastructure development projects in the vicinity of proposed location of the unit. A copy of such projects shall be sent to the Government.

**OTHERS:**

The promoter shall take all statutory and other necessary clearances and shall submit milestones / progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the Governor of Karnataka

P.R.119 **APARNA PAVATE**

Desk Officer (Technical Cell), Commerce & Industries Department

**Sub**: Industrial Policy 2006-11 - Approval of guidelines for sanction of Investment Subsidy to Effluent Treatment Plants – Reg.

**Read**: 1) G.O.No. CI 319 SPI 2005 dated 26.8.2006.

2) Proceedings of the 90th State Level Coordination Committee Meeting held under the Chairmanship of the Principal Secretary to Government, Commerce and Industries Department on 2.10.2008.

**Preamble :**

Provision has been made in the Industrial Policy 2006-11 vide Annexure-C, Sl.No.6., to extend One time Capital Investment Subsidy up to 50% of the cost of ETP subject to a ceiling of Rs.100.00 lakhs per unit for all categories of industries for all Zones. Hither to Guidelines have not been issued for sanction of the subsidy to the eligible New ETPs.

In the 90th State Level Coordination Committee meeting held under the Chairmanship the Principal Secretary to Government, Commerce and Industries Department, the proposal for issue of guidelines for sanction of Investment subsidy to ETPs has been examined and approved. The same is included as an **Annexure** to the Order. .

**Government Order No. CI 332 SPI 2008 dated 12th December 2008**

Under the circumstances explained in the preamble, approval is hereby accorded for the Guidelines prescribed for sanction of Capital Investment Subsidy to the Effluent Treatment Plants (ETPs), installed & commissioned by all categories of financed New Industrial Units under 2006-11 Industrial Policy in all Zones.

The guidelines are indicated in the **Annexure** to this order.

By Order and in the name of the Governor of Karnataka

**V. UMESH**

Principal Secretary to Government, Commerce & Industries Department

**ANNEXURE TO GOVERNMENT ORDER NO. CI 332 SPI 2008 DATED 12-12-2008**

**GUIDELINES FOR SANCTION OF INVESTMENT SUBSIDY TO EFFLUENT TREATMENT PLANTS**

For Micro and Small Enterprises, which have taken Capital Investment Subsidy under the 2006-11 policy or any other Policy on fixed assets including ETP, the subsidy on ETP investment should be deducted from the Capital subsidy of 50% of the cost of ETP. However, this condition does not applicable to industries in zone 3.

One time Capital Investment Subsidy is available only to ETP set up by all categories of financed New Units only and not for Sewage Treatment Plant (STP). For the purpose of calculation of investment on ETPs, ETP means both air pollution control equipments and water pollution control equipments and its fixed assets.

**PROCEDURE FOR CLAIMING SUBSIDY FOR ETPs**

Eligible Micro, small, medium enterprises and large and mega industries shall file an application in duplicate in the prescribed format along with the following enclosures to the Commissioner for Industrial Development and Director of Industries and Commerce. Documents to be furnished as below:

1. Application in the prescribed format.
2. Detailed Project report and Plan of ETP approved by KSPCB.
3. Copy of the term loan sanctioned letter from financial institution IEM / PMT / IL.
4. Partnership Deed / Memorandum of Articles of Association.
5. Investment made on ETP certified by financial institution with all details.
6. First Sale Invoice.
7. CFE & CFO issued by KSPCB.
8. Environment Clearance Certificate (ECC) issued by DFEE / MOEF, wherever applicable.
9. Form of declaration regarding employment of local persons in prescribed format.
10. Environment Management Plan (EMP).
11. Invoices, bills, voucher and receipts of the ETP.
12. Compliance certificate to the consent condition from KSPCB and certification for investment on ETP.

**COMMITTEE FOR SANCTION OF SUBSIDY FOR ETPs**

| | | |
|---|---|---|
| 1 | Commissioner for Industrial Development and Director of Industries and Commerce | Chairman |
| 2 | Member Secretary,<br>KSPCB | Member |
| 3 | Director,<br>Technical Cell, Department of Ecology and Environment Department. | Member |
| 4 | Director,<br>Technical Cell, Commerce and Industries Department | Member |
| 5 | Joint Director (ID),<br>Industries and Commerce Dept | Member Secretary |

**SCRUTINY OF ETP SUBSIDIES CLAIM**

The application for capital subsidy of ETP filed by the eligible industrial units in the Directorate of Industries and Commerce, the Committee comprising of representative from KSPCB, Joint Director, concerned DIC,'s and Joint Director (ID) shall take up physical verification of the company / ETP on receipt of application and shall arrange to place the case before the committee with detailed report for sanction of subsidy to ETPs. The sanction order regarding sanction of subsidy is to be issued to the unit

within 30 days from the date of receipt of application, if the company files the application with all relevant documents.

**APPLICATION FORM FOR SANCTION OF CAPITAL SUBSIDY TO ETPs**

| | | |
|---|---|---|
| 1 | Name and address of the company | |
| 2 | Location of the Unit | |
| 3 | Contact person, Phone No. and Fax No. | |
| 4 | Zone as per 2006-11 Industrial Policy | |
| 5 | EM / IEM / IL Registration Number and date | |
| 6 | Products manufactured | |
| 7 | Constitution of industry. | |
| 8 | Date of commencement of production | |
| 9 | Project cost of the unit | |
| | Land | |
| | Building | |
| | Plant & Machinery | |
| | Others | |
| | Total | |
| 10 | Cost of the ETP | |
| | Cost of Water Pollution control equipments & its fixed assets | |
| | Cost of Air Pollution control equipments & its fixed assets | |
| | Total | |
| 11 | CFE and CFO Nos. & Dates, issued by KSPCB | |
| 12 | ECC No. & Date by DFEE / MOEF, wherever applicable | |
| 13 | Compliance Certificate and Investment Certificate of ETP issued by KSPCB | |
| 14 | The other documents as prescribed for capital investment subsidy shall also be furnished ( In format I to VI) | |

**DECLARATION BY THE APPLICANT**

I / We hereby certify that the particulars given above are true and correct to the best of my/our knowledge and belief.

Place :

Date : Signature(s)

Name and Designation.

**GOVERNMENT OF KARNATAKA**

**DEPARTMENT OF INDUSTRIES AND COMMERCE**

No.----------------------- Office of the ---------------------------

--------------------------

Date:--------------------------

**CAPITAL SUBSIDY SANCTION ORDER FOR EFFLUENT TREATMENT PLANT(ETP)**

**Sub:** Sanction of capital Subsidy upto 50% to M/s -------------------- manufacturing -------------------------product.

**Ref:** 1. Your application for Investment Subsidy received on ---------------

2. Government Order No.CI.167.SPI.2005, dated 26th August 2006.

We are pleased to inform you that the Committee for sanction of capital subsidy for ETP in its meeting held on ----------- has sanctioned a subsidy of Rs.-------------- (Rupees----------only) to your unit at -------------on the basis of the investment made by you on Air pollution control equipments and / or Water pollution control units and its fixed assets. The Committee has accepted the investment as detailed below:

| | | |
|---|---|---|
| a) | Air pollution control equipments and its fixed assets | : Rs. |
| b) | Water pollution control units and its fixed assets | : Rs. |
| c) | Others | : Rs. |
| | **Total** | **: Rs.** |

Accordingly, the amount of capital subsidy to which you are eligible is determined at Rs.----------------- (Rupees------------------only) at 50% of the above investment under 2006-11 Industrial Policy.

You shall have to execute an agreement, a draft of which is enclosed to this sanction order. The original agreement should be on Stamp paper of Rs50/-. The agreement should be executed by the proprietor in case of proprietary concern, by one or more directors duly authorized by the board of directors of the company. The execution of the agreement should be under the common seal of the company, by all the partners incase of partnership concern. However, if any one of the partners holds a general power of attorney, he may execute the agreement on behalf of the remaining partners and furnish a certified true copy of the power of attorney. When the agreement is executed by a holder of general power of attorney, a certificate signed by all the partners on behalf of the firm to the effect that the general power of attorney is in force and not revoked as on the date of execution of the agreement, should be furnished.

Erasures, if any, should be properly attested No blank should be left in the agreement form.

The above agreement should be executed in the presence of Officer In-charge, District Industries Centre.

The sanction of this capital subsidy is subject to following conditions:

If the State Government is satisfied that the 50 % capital subsidy has been obtained by mis-representation of the essential facts, furnishing of false information or if the unit goes out of production within one year after receipt of subsidy, the State Government shall have the right to claim refund of the capital subsidy of Rs.---------------- sanctioned, together with interest as the State Government may charge.

The grantee shall not change the location of the whole or any part of the industrial unit or effect any contraction or disposal of a part of its total fixed capital investment within a period of one year after the unit receives this grant.

In the event of the capital subsidy being sanctioned, while at a later date found to be not actually due, the grantee shall refund to Government. Such portion or whole amount as determined by the Directorate of Industries and Commerce/ Joint Director, district Industries Centre. In the event of the grantee failing of refund such amount, the same shall be recovered as arrears of land revenue.

Where the industrial unit goes out of production or remains closed without production activities within one year from the date of receipt of subsidy except in case where the unit remain out of production for short period extending not more than six months due to reasons beyond control, such as shortage of raw materials, power etc., the grantee shall refund to Government the entire subsidy received. If the unit fails to refund the subsidy amount the same shall be recovered as arrears of land revenue.

The capital subsidy sanctioned herein is in the nature of "Grant –in-aid" and shall not be construed as a "contract" with Government of Karnataka. The grantee shall not exercise his right of privity of contract in the matter of release of subsidy by Government of Karnataka, who shall release the subsidy

amount as and when the grantee is eligible for the same, in such proportions and installments as the Government may regulate. The subsidy sanctioned will be released only through the concerned Financial Institutions / Banks.

P.R.118 Joint Director (I.D)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಶಾಂತಾರಾಮ್ ಚಿಪಳೂಣಕರ್, ಹಿಂದಿನ ತಹಶೀಲ್ದಾರ್, ಕಾರ್ಕಳ (ಪ್ರಸ್ತುತ ನಿವೃತ್ತ) ಮತ್ತು ಅವರ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರ ಪ್ರಸ್ತಾವನೆ ಪತ್ರ ಸಂ: ಇಎಸ್‌ಟಿ (1): ಸಿಆರ್–6/ 2004–05, ದಿನಾಂಕ: 30–11–2005.
2) ಸರ್ಕಾರದ ಆದೇಶ ಸಂ: ಕಂಇ 2 ಎಡಿಇ 2006, ದಿನಾಂಕ: 11–7–2006.
3) ಶ್ರೀ ಶಾಂತಾರಾಮ್ ಚಿಪಳೂಣಕರ್, ಶ್ರೀ ಸದಾಶಿವ ಕಲ್ಯಾಣಪುರ, ಶ್ರೀ ಬಾಲಕೃಷ್ಣ, ಶ್ರೀ ಶಿವರಾಮ, ಶ್ರೀ ಜೆ.ಎಂ.ಡಾಂಗೆ, ಇವರುಗಳಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸು ದಿನಾಂಕ: 24–11–2006.
4) ಶ್ರೀ ಶಾಂತಾರಾಮ್ ಚಿಪಳೂಣಕರ್, ಶ್ರೀ ಸದಾಶಿವ ಕಲ್ಯಾಣಪುರ, ಶ್ರೀ ಬಾಲಕೃಷ್ಣ, ಶ್ರೀ ಶಿವರಾಮ, ಶ್ರೀ ಜೆ.ಎಂ.ಡಾಂಗೆ ಇವರುಗಳ ಸಮಜಾಯಿಷಿ ದಿ: 19–1–2007, 17–1–2007, 26–12–2006, 22–2–2007 ಮತ್ತು 26–12–2006.
5) ಸರ್ಕಾರದ ಆದೇಶ ಸಂ: ಆರ್‌ಡಿ 02 ಎಡಿಇ 2006, ದಿನಾಂಕ: 13–08–2008.
6) ಸರ್ಕಾರದ ಆದೇಶ ಸಂ: ಆರ್‌ಡಿ 02 ಎಡಿಇ 2006, ದಿನಾಂಕ: 10–11–2008.

**ಪ್ರಸ್ತಾವನೆ:**

ಶ್ರೀ ಶಾಂತಾರಾಮ ಚಿಪ್ಳೋಣ್‌ಕರ್, ನಿವೃತ್ತ ತಹಶೀಲ್ದಾರರು ಇವರು ಹಿಂದೆ ತಹಶೀಲ್ದಾರ್, ಕಾರ್ಕಳ ಆಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಹಾಗೂ ಇವರ ಸಿಬ್ಬಂದಿ ವರ್ಗದವರು ವಿಠಲ ಪೂಜಾರಿ ಮತ್ತು ಇತರ 40 ಜನರು ಕಾರ್ಕಳ ಕಸಬಾ ಗ್ರಾಮದ ಸರ್ವೆ ನಂ: 175/1 ಮತ್ತು ಇತರೆ ಸ್ಥಳಗಳಲ್ಲಿ ಅಕ್ರಮ ಕಟ್ಟಡ ನಿರ್ಮಿಸಿಕೊಂಡು ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 94ಸಿ ರಂತೆ ನಮೂನೆ 1ರಲ್ಲಿ ಕಟ್ಟಡ ಸಕ್ರಮಣ ಕೋರಿ ಅರ್ಜಿ ಸಲ್ಲಿಸಿದ್ದ ಪ್ರಕರಣಗಳಲ್ಲಿ ಕರ್ತವ್ಯ ನಿಷ್ಠೆ ಇಲ್ಲದೆ ಇರುವುದನ್ನು ತೋರ್ಪಡಿಸಿ ದುರ್ನಡತೆಯನ್ನು ಎಸಗಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಮೇಲೆ ಓದಲಾದ ಕ್ರ.ಸಂ.(1)ರನ್ವಯ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಶಾಂತಾರಾಮ ಚಿಪ್ಳೋಣ್‌ಕರ್, ಹಿಂದಿನ ತಹಶೀಲ್ದಾರ್, ಕಾರ್ಕಳ ಹಾಗೂ ಶ್ರೀ ಸದಾಶಿವ ಕಲ್ಯಾಣಪುರ ಹಿಂದಿನ ಉಪತಹಶೀಲ್ದಾರ್ ಇವರುಗಳು ಈಗಾಗಲೇ ನಿವೃತ್ತಿ ಹೊಂದಿದ್ದರಿಂದ ಮೇಲೆ ಓದಲಾದ ಕ್ರ.ಸಂ.(2) ದಿನಾಂಕ:11–7–2006ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 & 11ಎ ರಡಿಯಲ್ಲಿ ನಿಗದಿಪಡಿಸಿರುವ ಕಾರ್ಯಭಾರವನ್ನು ಅನುಸರಿಸಬೇಕೆಂದು ಆದೇಶಿಸಿರುತ್ತದೆ. ಉಳಿದ ಸಿಬ್ಬಂದಿ ವರ್ಗದವರಾದ ಶ್ರೀ ಬಾಲಕೃಷ್ಣ, ಹಿಂದಿನ ಕಂದಾಯ ನಿರೀಕ್ಷಕರು, ಶ್ರೀ ಶಿವರಾಮ, ಹಿಂದಿನ ಗ್ರಾಮಲೆಕ್ಕಿಗರು ಮತ್ತು ಶ್ರೀ ಜೆ.ಎಂ.ಡಾಂಗೆ ಹಿಂದಿನ ದ್ವಿತಿಯ ದರ್ಜೆ ಸಹಾಯಕರು ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರ.ಸಂ.(3)ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಅದರಂತೆ, ಶ್ರೀ ಶಾಂತಾರಾಮ್ ಚಿಪಳೂಣಕರ್, ಶ್ರೀ ಸದಾಶಿವ ಕಲ್ಯಾಣಪುರ, ಶ್ರೀ ಬಾಲಕೃಷ್ಣ, ಶ್ರೀ ಶಿವರಾಮ, ಶ್ರೀ ಜೆ.ಎಂ.ಡಾಂಗೆ ಇವರುಗಳು ಸದರಿ ನೋಟೀಸಿಗೆ ಸಮಜಾಯಿಷಿಗಳನ್ನು ನೀಡಿ ಆರೋಪಗಳನ್ನು ಅಲ್ಲಗೆಳೆದು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಜಂಟಿ ಇಲಾಖೆ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರ.ಸಂ (5), ದಿನಾಂಕ: 13–08–2008ರ ಆದೇಶದಲ್ಲಿ ಶ್ರೀ ಎನ್.ಸುಬ್ಬರಾವ್,

ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜ್ಯೂಡಿಷಿಯಲ್ ಲೇಔಟ್ ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರಸ್ಥಾನಿಕ ಸಹಾಯಕರು, ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರು ಈ ಪ್ರಕರಣದ ಇಲಾಖಾ ವಿಚಾರಣೆಯನ್ನು ಉಡುಪಿಗೆ ಹೋಗಿ ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ, ಬೇರೆ ಒಬ್ಬರನ್ನು ನೇಮಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿದ್ದರಿಂದ, ಮೇಲೆ ಓದಲಾದ ಕ್ರ.ಸಂ:(6)ರ ದಿನಾಂಕ: 10–11–2008ರಲ್ಲಿ ಶ್ರೀ ಟಿ.ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಪ್ರಸ್ತುತ ಶ್ರೀ ಟಿ.ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಸಧ್ಯ ಪೂರ್ಣ ಅವಧಿ ಕರ್ತವ್ಯದ ಮೇರೆಗೆ ಕರ್ನಾಟಕ ರಾಜ್ಯ ಗ್ರಾಹಕ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ ಇಲ್ಲಿ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದು ತಮಗೆ ವಹಿಸಿರುವ ಈ ವಿಚಾರಣಾಧಿಕಾರಿಯ ಕರ್ತವ್ಯವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಬದಲಿ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ಕೋರಿಕೊಂಡಿರುತ್ತಾರೆ. ಅದರಂತೆ ಸರ್ಕಾರವು ಸದರಿಯವರ ಮನವಿಯನ್ನು ಪರಿಗಣಿಸಿ ಈ ಕೆಳಕಂಡಂತೆ ಬದಲಾವಣೆ ಮಾಡಿ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 02 ಎಡಿಇ 2006, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರದ ಆದೇಶ ಸಂ: ಆರ್‌ಡಿ 02 ಎಡಿಇ 2006, ದಿನಾಂಕ: 10–11–2008ರಲ್ಲಿ ನೇಮಿಸಲಾಗಿದ್ದ ಶ್ರೀ ಟಿ.ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರ ಬದಲಿಗೆ ಶ್ರೀ ಎನ್.ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:1033, 9ನೇ 'ಬಿ" ಮೇನ್, 8ನೇ ಕ್ರಾಸ್, ಜ್ಯೂಡಿಷಿಯಲ್ ಲೇಔಟ್, ಜಿಕೆವಿಕೆ ಪೋಸ್ಟ್, ಬೆಂಗಳೂರು–560064 ಇವರನ್ನು ಪುನ: ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಉಡುಪಿ ಜಿಲ್ಲಾಧಿಕಾರಿಗಳ ಕಛೇರಿ ಬದಲು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ನಡೆಸತಕ್ಕದ್ದು ಹಾಗೂ ಇಲಾಖಾ ವಿಚಾರಣೆಯನ್ನು ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ವಿಚಾರಣೆಯನ್ನು ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಉಳಿದ ಅಂಶಗಳು ಸರ್ಕಾರದ ಆದೇಶ ಸಂ: ಆರ್‌ಡಿ 02 ಎಡಿಇ 2006, ದಿನಾಂಕ: 13–08–2008ರ ಆದೇಶದಲ್ಲಿರುವಂತೆ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.812

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆ ಶ್ರೀನಿವಾಸಪುರ ತಾಲ್ಲೂಕಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಎಇ6/ ಕೋಲಾರ–ಶ್ರೀನಿವಾಸಪುರ ರಸ್ತೆ ಮೇಲ್ದರ್ಜೆ/ 07–08, ದಿನಾಂಕ: 16–1–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಕೋಲಾರ ಜಿಲ್ಲೆ ಶ್ರೀನಿವಾಸಪುರ ತಾಲ್ಲೂಕಿನ ಇತರೆ ರಸ್ತೆಗಳ ಜೊತೆಗೆ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|
| ಎ.ವೈ.ಎ ರಸ್ತೆಯಿಂದ ಉತ್ತನೂರು ರಸ್ತೆ ಮಾರ್ಗ ಚನ್ನಪಲ್ಲಿ, ನಾರಾಯಣಪುರ, ಶೇಷಾಪುರ | 10.20 |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 427 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2009**

ಕೋಲಾರ ಜಿಲ್ಲೆ ಶ್ರೀನಿವಾಸಪುರ ತಾಲ್ಲೂಕಿನ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|
| ಎ.ವೈ.ಎ ರಸ್ತೆಯಿಂದ ಉತ್ತನೂರು ರಸ್ತೆ ಮಾರ್ಗ ಚನ್ನಪಲ್ಲಿ, ನಾರಾಯಣಪುರ, ಶೇಷಾಪುರ | 10.20 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.548

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ವ್ಯಾಪ್ತಿಯ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ರಶಾ/ಸಇ3/2008–09, ದಿನಾಂಕ: 15–1–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಈ ಕೆಳಕಂಡ 2(ಎರಡು) ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 1. | ಹಲಸವಾಳ, ಸಿಂಧುವಾಡಿ, ಮಂಡಗದ್ದೆ, ಕೆಸವಿನ ಮನೆ ರಸ್ತೆ | 14.00 |
| 2. | ತೂದೂರು, ಉಬ್ಬೂರು ರಸ್ತೆಯಿಂದ ಶೇಡ್ಗಾರು ಹೊಸಕೊಪ್ಪ ಮುಖಾಂತರ ರಾ.ಹೆ.13ರ 23ನೇ ಮೈಲಿವರೆಗೆ ರಸ್ತೆ | 6.60 |
| | **ಒಟ್ಟು** | **20.60** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 98 ಸಿಆರ್‌ಎಂ 2009, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2009**

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಒಟ್ಟು 20.60 ಕಿ.ಮೀ ಉದ್ದದ ಈ ಕೆಳಕಂಡ 2 (ಎರಡು) ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 1. | ಹಲಸವಾಳ, ಸಿಂಧುವಾಡಿ, ಮಂಡಗದ್ದೆ, ಕೆಸವಿನ ಮನೆ ರಸ್ತೆ | 14.00 |
| 2. | ತೂದೂರು, ಉಬ್ಬೂರು ರಸ್ತೆಯಿಂದ ಶೇಡ್ಗಾರು ಹೊಸಕೊಪ್ಪ ಮುಖಾಂತರ ರಾ.ಹೆ.13ರ 23ನೇ ಮೈಲಿವರೆಗೆ ರಸ್ತೆ | 6.60 |
| | **ಒಟ್ಟು** | **20.60** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.547

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ,

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ಶಿವಮೊಗ್ಗ, ದಾವಣಗೆರೆ, ಚಿಕ್ಕಮಗಳೂರು ಮತ್ತು ಮೈಸೂರು ಜಿಲ್ಲೆಗಳ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**

1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇಂ3/ರಸ್ತೆಮೇಲ್ದರ್ಜೆ/ 07–08, ದಿನಾಂಕ: 6–11–2007 (ಎರಡು ಪ್ರತ್ಯೇಕ ಪತ್ರಗಳು).
2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇಂ3/ರಸ್ತೆಮೇಲ್ದರ್ಜೆ/ 07–08, ದಿನಾಂಕ: 31–1–2008 (ಮೂರು ಪ್ರತ್ಯೇಕ ಪತ್ರಗಳು).
3) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ಮೇಘ/ಜೆಇ–2/ಬೆಂಉತಾ/ರಸ್ತೆ/ಕೋಬೆಹ/ಯವಿರಮೇ/ 07–08, ದಿನಾಂಕ: 16–11–2007.
4) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ಸಾಕೋ/ ಚಿಕ್ಕಮಗಳೂರು/ಸಇಂ2/ 08–09, ದಿನಾಂಕ: 16–4–2008.
5) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇಂ1/ 08–09, ದಿನಾಂಕ: 3–7–2008.
6) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇಂ1/ 08–09, ದಿನಾಂಕ: 9–7–2008.
7) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇಂ3/ 08–09, ದಿನಾಂಕ: 2–9–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಶಿವಮೊಗ್ಗ, ದಾವಣಗೆರೆ, ಚಿಕ್ಕಮಗಳೂರು ಮತ್ತು ಮೈಸೂರು ಜಿಲ್ಲೆಗಳ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| | **ಶಿವಮೊಗ್ಗ ಜಿಲ್ಲೆ** | |
| | **ಹೊಸನಗರ ತಾಲ್ಲೂಕು** | |
| 1. | ಬೈಸೆ–ಚಕ್ರನಗರ–ಮುಂಡಳ್ಳಿ ರಸ್ತೆ | 11.00 |
| 2. | ಸಂಪೆಕಟ್ಟೆ, ಕಟ್ಟಿನಹೊಳೆ, ಗೌರಿಕೆರೆ ರಸ್ತೆ | 14.50 |
| 3. | ಸಂಪೆಕಟ್ಟೆ–ಹೆಬ್ಬುರಳಿ–ಮತ್ತಿಮನೆ | 8.50 |
| 4. | ಅಡಗೋಡಿ–ಡಬ್ಲ್ಯೂಬಿ ಸರ್ಕಲ್, ಹಸಿರುಮರ್ಕಿ | 11.50 |
| 5. | ಹೆಂಡೆಗದ್ದೆ ಹೊಳೆಕೊಪ್ಪ ಅಂಡಗದೋದುರು | 8.50 |
| | **ಒಟ್ಟು** | **54.00** |
| | **ತೀರ್ಥಹಳ್ಳಿ ತಾಲ್ಲೂಕು** | |
| 6. | ರಾಹೆ–13ರ 277 ಕಿ.ಮೀ ನಿಂದ ಕುಕ್ಕೆ–ದತ್ತರಾಜಪುರ ಸಂತೆಹಕ್ಕಲು ರಸ್ತೆ | 17.00 |
| 7. | ಗಡಿಕಲ್ಲು–ಮಕ್ಕಿಮನೆ ಕೋಣನಕಾನು ಕೊಪ್ಪ ತಾ. ಗಡಿ ರಸ್ತೆ | 10.00 |
| 8. | ಮಕ್ಕಿಮನೆ, ಹೇರಂಭಾಪುರ, ಕಟ್ಟೆಹಕ್ಕಲು ಮೃಗವಧೆ ಮಳಂದೂರು ರಸ್ತೆ | 21.00 |
| 9. | ಕೋಣಂದೂರು ಕೋದುರು ರಸ್ತೆ ಮಾರ್ಗ ಮಳಲಿಮಕ್ಕಿ ನೊಣಬೂರು, ಅಂಬುತೀರ್ಥ ಬಂದ್ಯ | 15.00 |

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 10. | ಅರಗ ಶಂಕರಹಳ್ಳಿ ರಸ್ತೆ ಮಾರ್ಗ ನೊಣಬೂರು ಮಲ್ಲೇಸರ | 15.00 |
| 11. | ಬಿಳಿಕೊಪ್ಪಸಾತಗೋಡು ರಸ್ತೆ | 7.00 |
| 12. | ಕಲವಳ್ಳಿ ಕವಲೇದುರ್ಗ ರಸ್ತೆ ಮಾರ್ಗ ಕೆಸ್ತೂರು, ಕಡಸವಳ್ಳಿ ಅಂದಬೈಲು | 10.00 |
| 13. | ಬಿದರಗೋಡು ಮುತ್ತಳ್ಳಿ ರಸ್ತೆ | 4.50 |
| 14. | ದಾನಸಾಲೆ–ಬಿಸಿಲುಮನೆ–ಅತ್ತಿಗದ್ದೆ–ಕನ್ನಂಗಿ ರಸ್ತೆ | 6.50 |
| 15. | ಎನ್.ಹೆಚ್–13ರ ಕಿ.ಮೀ 566ರಲ್ಲಿ ಇರುವ ಬಿಳುಮಂಡೆಯಿಂದ ಉಬ್ಬೂರು–ಕನ್ನಂಗಿ ರಸ್ತೆ | 10.00 |
| 16. | ಮಾಸ್ತಿಕಲ್ಲು–ಬಸರವಾನಿ–ಕನ್ನಂಗಿ ರಸ್ತೆ | 4.00 |
| | **ಒಟ್ಟು** | **120.00** |
| | **ಭದ್ರಾವತಿ ತಾಲ್ಲೂಕು** | |
| 17. | ಭದ್ರಾವತಿ–ಹೊಳೆಹೊನ್ನೂರು ರಸ್ತೆಯಿಂದ ಎಂ.ಎಂ.ರಸ್ತೆಗೆ ಸೇರುವುದು ಎಮ್ಮೆಹಟ್ಟಿ, ತಿಮ್ಮಾಪುರ, ಮಾರಶೆಟ್ಟಿಹಳ್ಳಿ, ಕಲ್ಲಿಹಾಳು, ಅರಕೆರೆ, ದಾನವಾಡಿ ಮೂಲಕ | 10.00 |
| 18. | ಭದ್ರಾವತಿ ತಾಲ್ಲೂಕು ತಡಸ–ಗುಡುಮಘಟ್ಟ, ಆನವೇರಿ, ಅರಿಶಿನಘಟ್ಟ, ದಿಗ್ಗೇನಹಳ್ಳಿ, ಸೈದರ್ ಕಲ್ಲಹಳ್ಳಿ ಸೇರುವ ರಸ್ತೆ | 15.00 |
| 19. | ಕೆ.ಕೆ.ರಸ್ತೆಯಿಂದ ಎಂ.ಎಂ.ರಸ್ತೆಗೆ ಸೇರುವುದು ಅರಕೆರೆ, ಕೋಡಿಹಳ್ಳಿ ಮೂಲಕ | 5.50 |
| 20. | ಹೆಚ್.ಎ.ರಸ್ತೆಯಿಂದ ಹೊಸ ಸನ್ಯಾಸಿ ಕೋಡಮಗ್ಗೆ ಮಂಡ್ಯ ಕ್ಯಾಂಪ್, ಕನಸಿನಕಟ್ಟೆ, ಸಿದ್ಲಿಪುರಕ್ಕೆ ಸೇರುವ ರಸ್ತೆ | 8.50 |
| | **ಒಟ್ಟು** | **39.00** |
| | **ಸಾಗರ ತಾಲ್ಲೂಕು** | |
| 21. | ಹುಕ್ಕೇರಿ–ಹುಣಾಲುಮಡಿಕೆ–ಆವಿನಹಳ್ಳಿ ರಸ್ತೆ | 14.00 |
| 22. | ಉಳ್ಳೂರು–ಬಾಳೆಗೂಂಡಿ–ನೀಚಡಿ–ಹೊಸಂತೆ–ಕೋಟೆಕೊಪ್ಪ ಗೌತಮಪುರ ರಸ್ತೆ | 19.50 |
| | **ಒಟ್ಟು** | **33.50** |
| | **ದಾವಣಗೆರೆ ಜಿಲ್ಲೆ** | |
| | **ಜಗಳೂರು ತಾಲ್ಲೂಕು** | |
| 23. | ಕೊಟ್ಟೂರು–ಲಕ್ಕಂಪುರ ರಸ್ತೆ ಮಾರ್ಗ ನಾಗರಕಟ್ಟೆ, ಸೊಕ್ಕೆ, ಚಿಕ್ಕಬಂಟನಹಳ್ಳಿ | 5.50 |
| 24. | ಅಣಜಿ–ಸೊಕ್ಕೆ ರಸ್ತೆ ಮಾರ್ಗ ಕುರುಡಿ, ಮರುಕುಂಟೆ, ಪಲ್ಲಾಗಟ್ಟೆ | 4.50 |
| 25. | ಜಗಳೂರು–ಹಿರೇಮೇಗಳಗೆರೆ ರಸ್ತೆ ಪಲ್ಲಾಗಟ್ಟೆ, ಉಚ್ಚಂಗಿದುರ್ಗ | 27.00 |
| 26. | ರಾಜ್ಯಹೆದ್ದಾರಿ–45ರಿಂದ ಚಿಕ್ಕಮಲ್ಲನಹೊಳೆ ಮಾರ್ಗ ಗೌರೀಪುರ, ಹುಚ್ಚವ್ವನ ಹಳ್ಳಿ | 22.00 |
| 27. | ದೇವಿಕೆರೆ–ಪಲ್ಲಾಗಟ್ಟೆ ರಸ್ತೆ ಮಾರ್ಗ ಸೊರಡ್ಡಿಹಳ್ಳಿ | 12.00 |
| 28. | ಜಗಳೂರು–ಜಮ್ಮಾಪುರ ರಸ್ತೆ | 9.00 |
| 29. | ರಾಜ್ಯ ಹೆದ್ದಾರಿ–65ರಿಂದ ಕೆಚ್ಚೇನಹಳ್ಳಿ(ರಾಜ್ಯ ಹೆದ್ದಾರಿ–45) ಮಾರ್ಗ ಮದಿಕೇರೆನಹಳ್ಳಿ ಐಯ್ಯನಹಳ್ಳಿ ರಸ್ತೆ | 16.00 |
| 30. | ಮುಗ್ಗಿದ ರಾಗಿಹಳ್ಳಿ ಮುಚ್ಚನೂರು ರಸ್ತೆ ಮಾರ್ಗ ಹಾಲೇಕಲ್ಲು | 8.00 |
| 31. | ರಂಗಾಪುರ ಗಡಿಮಾಕುಂಟೆ ರಸ್ತೆ ಮಾರ್ಗ ಗೌರಮ್ಮನಹಳ್ಳಿ | 22.00 |
| 32. | ಹಿರೇಮಲ್ಲನಹೊಳೆ ಹುಚ್ಚವ್ವನಹಳ್ಳಿ ರಸ್ತೆ | 4.00 |
| | **ಒಟ್ಟು** | **130.00** |

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| | **ಚಿಕ್ಕಮಗಳೂರು ಜಿಲ್ಲೆ** | |
| | **ತರೀಕೆರೆ ತಾಲ್ಲೂಕು(ಬೀರೂರು ವಿ.ಸ)** | |
| 33. | ತರೀಕೆರೆ ತಾಲ್ಲೂಕು ಗೂಳ್ಳೂರು ಮನೆ-ಬಿ.ಟಿ.ರಸ್ತೆಯಿಂದ ಮಲ್ಲಿಗೆಹಳ್ಳಿ ರಸ್ತೆ | 4.00 |
| | **ಒಟ್ಟು** | **4.00** |
| | **ಮೈಸೂರು ಜಿಲ್ಲೆ** | |
| | **ನಂಜನಗೂಡು ತಾಲ್ಲೂಕು(ವರುಣಾ ವಿ.ಸ)** | |
| 34. | ಮಡಹಳ್ಳಿಯಿಂದ ಬದನವಾಳಿಗೆ ಅಳಗಂಚಿ, ದೇವನೂರು ಮಾರ್ಗವಾಗಿ ಸೇರುವ ರಸ್ತೆ (ಎಸ್.ಹೆಚ್.57ರಿಂದ 80) | 6.40 |
| 35. | ತಗಡೂರಿನಿಂದ ಕಾರೆಪುರಕ್ಕೆ ಚಿನ್ನಂಬಳ್ಳಿ ಕಾರ್ಯ ಮಾರ್ಗವಾಗಿ ಸೇರುವ ರಸ್ತೆ (ಎಸ್.ಹೆಚ್.57ರಿಂದ 57ಗೆ) | 9.00 |
| 36. | ಹನುಮನಪುರದಿಂದ ಪಿ.ಮರಹಳ್ಳಿ-ಅವತಾಳಪುರ ಮಾರ್ಗ ದೊಡ್ಡಹೊಮ್ಮ ಸೇರುವ ರಸ್ತೆ | 8.00 |
| 37. | ಎಸ್.ಹೆಚ್.80ರಿಂದ ಎಸ್.ಹೆಚ್.80ಗೆ ಕೊಣನೂರು-ಕೊಣನುಪುರ-ಕೊಣನೂರುಪಾಳ್ಯ ರಸ್ತೆ | 5.00 |
| 38. | ಸಿರಾ-ನಂಜನಗೂಡು ರಸ್ತೆಯಿಂದ ಬಿಳಿಗೆರೆ ಸೋನಹಳ್ಳಿ-ಸಣ್ಣಮಲ್ಲಪುರ-ಕಿರುಗುಂದ ಮಾರ್ಗವಾಗಿ ಮಡಹಳ್ಳಿಗೆ ಸೇರುವ ರಸ್ತೆ(ಎಸ್.ಹೆಚ್.84ರಿಂದ 57) | 7.00 |
| 39. | ದಾಸನೂರಿನಿಂದ ದೊಡ್ಡಹೊಮ್ಮ ಚಿಕ್ಕಹೊಮ್ಮ ಮಾರ್ಗವಾಗಿ ತೊರವಳ್ಳಿಗೆ ಸೇರುವ ರಸ್ತೆ | 6.40 |
| 40. | ಹೊಸಕೋಟೆಯಿಂದ ತುಂನೇರಳೆ ಮಾರ್ಗವಾಗಿ ಮರಡಿಹುಂಡಿ ಸೇರುವ ರಸ್ತೆ (ಎಸ್.ಹೆಚ್.84ಎ ರಿಂದ ಮಾರಡಿಹುಂಡಿ ಸೇರುವ ರಸ್ತೆ) | 5.00 |
| 41. | ಎನ್.ಟಿ.ಎನ್.ರಸ್ತೆಯಿಂದ ಜಿ.ಮರಹಳ್ಳಿ-ಬಿಳಗುಲಿ ಮಾರ್ಗ ಸಾಲುಂಡಿ (ಜೋಡಿಹರಿಪುರ)ಕ್ಕೆ ಸೇರುವ ರಸ್ತೆ | 6.00 |
| 42. | ದೇವನೂರಿನಿಂದ ವರಹಳ್ಳಿ ಮಾರ್ಗವಾಗಿ ತಗಡೂರಿಗೆ ಸೇರುವ ರಸ್ತೆ (ಎಂಡಿಆರ್ ರಿಂದ ಎಸ್.ಹೆಚ್.57 ಸೇರುವ ರಸ್ತೆ) | 4.00 |
| 43. | ಸಿರಾ-ನಂಜನಗೂಡು ಎಸ್.ಹೆಚ್.84 ರಸ್ತೆಯಿಂದ ಆಲಂಬೂರು-ಮಂಟಿ ಮಾರ್ಗವಾಗಿ ಬಾಗಲಕೋಟೆ-ಬಿಳಿಗಿರಿರಂಗನಬೆಟ್ಟ ಎಸ್.ಹೆಚ್.57 ಸೇರುವ ರಸ್ತೆ | 3.00 |
| | **ಒಟ್ಟು** | **59.80** |
| | **ಮೈಸೂರು ತಾಲ್ಲೂಕು(ಚಾಮುಂಡೇಶ್ವರಿ ವಿ.ಸ)** | |
| 44. | ತಿಬ್ಬಯ್ಯನಹುಂಡಿಯಿಂದ ಜೀವನಭೀಮನಗರ ಸೇರುವ ರಸ್ತೆ (ಎಲ್.ಐ.ಸಿ. ಕಾಲೋನಿ) ಮಾರ್ಗ ಮೂಗನಹುಂಡಿ ಲಿಂಗಾಬೂದಿಪಾಳ್ಯ | 7.80 |
| | **ಒಟ್ಟು** | **7.80** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 598 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2009**

ಶಿವಮೊಗ್ಗ, ದಾವಣಗೆರೆ, ಚಿಕ್ಕಮಗಳೂರು ಮತ್ತು ಮೈಸೂರು ಜಿಲ್ಲೆಗಳ ಒಟ್ಟು 448.10 ಕಿ.ಮೀ ಉದ್ದದ ಈ ಕೆಳಕಂಡ 44 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| | **ಶಿವಮೊಗ್ಗ ಜಿಲ್ಲೆ** | |
| | **ಹೊಸನಗರ ತಾಲ್ಲೂಕು** | |
| 1. | ಬೈಸೆ-ಚಕ್ರನಗರ-ಮುಂಡಳ್ಳಿ ರಸ್ತೆ | 11.00 |

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 2. | ಸಂಪೆಕಟ್ಟೆ, ಕಟ್ಟಿನಹೊಳೆ, ಗೌರಿಕೆರೆ ರಸ್ತೆ | 14.50 |
| 3. | ಸಂಪೆಕಟ್ಟೆ–ಹೆಬ್ಬುರಳಿ–ಮತ್ತಿಮನೆ | 8.50 |
| 4. | ಅಡಗೋಡಿ–ಡಬ್ಲ್ಯೂಬಿ ಸರ್ಕಲ್, ಹಸಿರುಮಕ್ಕಿ | 11.50 |
| 5. | ಹೆಂಡೆಗದ್ದೆ ಹೊಳೆಕೊಪ್ಪ ಅಂಡಗದೋದುರು | 8.50 |
| | **ಒಟ್ಟು** | **54.00** |
| | **ತೀರ್ಥಹಳ್ಳಿ ತಾಲ್ಲೂಕು** | |
| 6. | ರಾಹೆ–13ರ 277 ಕಿ.ಮೀ ನಿಂದ ಕುಕ್ಕೆ–ದತ್ತರಾಜಪುರ ಸಂತೆಹಕ್ಲಲು ರಸ್ತೆ | 17.00 |
| 7. | ಗಡಿಕಲ್ಲು–ಮಕ್ಕಿಮನೆ ಕೋಣನಕಾನು ಕೊಪ್ಪ ತಾ. ಗಡಿ ರಸ್ತೆ | 10.00 |
| 8. | ಮಕ್ಕಿಮನೆ, ಹೇರಂಭಾಪುರ, ಕಟ್ಟೆಹಕ್ಲಲು ಮೃಗವಧೆ ಮಳಂದೂರು ರಸ್ತೆ | 21.00 |
| 9. | ಕೋಣಂದೂರು ಕೋದುರು ರಸ್ತೆ ಮಾರ್ಗ ಮಳಲಿಮಕ್ಕಿ ನೊಣಬೂರು, ಅಂಬುತೀರ್ಥ ಬಂದ್ಯ | 15.00 |
| 10. | ಅರಗ ಶಂಕರಹಳ್ಳಿ ರಸ್ತೆ ಮಾರ್ಗ ನೊಣಬೂರು ಮಲ್ಲೇಸರ | 15.00 |
| 11. | ಬಿಳಿಕೊಪ್ಪಸಾತಗೋಡು ರಸ್ತೆ | 7.00 |
| 12. | ಕಲವಳ್ಳಿ ಕವಲೇದುರ್ಗ ರಸ್ತೆ ಮಾರ್ಗ ಕೆಸ್ತೂರು, ಕಡಸವಳ್ಳಿ ಅಂದಬೈಲು | 10.00 |
| 13. | ಬಿದರಗೋಡು ಮುತ್ತಳ್ಳಿ ರಸ್ತೆ | 4.50 |
| 14. | ದಾನಸಾಲೆ–ಬಿಸಿಲುಮನೆ–ಅತ್ತಿಗದ್ದೆ–ಕನ್ನಂಗಿ ರಸ್ತೆ | 6.50 |
| 15. | ಎನ್.ಹೆಚ್–13ರ ಕಿ.ಮೀ 566ರಲ್ಲಿ ಇರುವ ಬಿಳುಮಂಡೆಯಿಂದ ಉಬ್ಬೂರು–ಕನ್ನಂಗಿ ರಸ್ತೆ | 10.00 |
| 16. | ಮಾಸ್ತಿಕಲ್ಲು–ಬಸರವಾನಿ–ಕನ್ನಂಗಿ ರಸ್ತೆ | 4.00 |
| | **ಒಟ್ಟು** | **120.00** |
| | **ಭದ್ರಾವತಿ ತಾಲ್ಲೂಕು** | |
| 17. | ಭದ್ರಾವತಿ–ಹೊಳೆಹೊನ್ನೂರು ರಸ್ತೆಯಿಂದ ಎಂ.ಎಂ.ರಸ್ತೆಗೆ ಸೇರುವುದು ಎಮ್ಮೆಹಟ್ಟಿ, ತಿಮ್ಲಾಪುರ, ಮಾರಶೆಟ್ಟಿಹಳ್ಳಿ, ಕಲ್ಲಿಹಾಳು, ಅರಕೆರೆ, ದಾನವಾಡಿ ಮೂಲಕ | 10.00 |
| 18. | ಭದ್ರಾವತಿ ತಾಲ್ಲೂಕು ತಡಸ–ಗುಡುಮಘಟ್ಟ, ಆನವೇರಿ, ಅರಿಶಿನಘಟ್ಟ, ದಿಗ್ಗೇನಹಳ್ಳಿ, ಸ್ಯೆದರ್ ಕಲ್ಲಹಳ್ಳಿ ಸೇರುವ ರಸ್ತೆ | 15.00 |
| 19. | ಕೆ.ಕೆ.ರಸ್ತೆಯಿಂದ ಎಂ.ಎಂ.ರಸ್ತೆಗೆ ಸೇರುವುದು ಅರಕೆರೆ, ಕೋಡಿಹಳ್ಳಿ ಮೂಲಕ | 5.50 |
| 20. | ಹೆಚ್.ಎ.ರಸ್ತೆಯಿಂದ ಹೊಸ ಸನ್ಯಾಸಿ ಕೋಡಮಗ್ಗೆ ಮಂಡ್ಯ ಕ್ಯಾಂಪ್, ಕನಸಿನಕಟ್ಟೆ, ಸಿದ್ದಿಪುರಕ್ಕೆ ಸೇರುವ ರಸ್ತೆ | 8.50 |
| | **ಒಟ್ಟು** | **39.00** |
| | **ಸಾಗರ ತಾಲ್ಲೂಕು** | |
| 21. | ಹುಕ್ಕೇರಿ–ಹುಣಾಲುಮಡಿಕೆ–ಆವಿನಹಳ್ಳಿ ರಸ್ತೆ | 14.00 |
| 22. | ಉಳ್ಳೂರು–ಬಾಳೆಗೂಂಡಿ–ನೀಚಡಿ–ಹೊಸಂತೆ–ಕೋಟೆಕೊಪ್ಪ ಗೌತಮಪುರ ರಸ್ತೆ | 19.50 |
| | **ಒಟ್ಟು** | **33.50** |
| | **ದಾವಣಗೆರೆ ಜಿಲ್ಲೆ** | |
| | **ಜಗಳೂರು ತಾಲ್ಲೂಕು** | |
| 23. | ಕೊಟ್ಟೂರು–ಲಕ್ಕಂಪುರ ರಸ್ತೆ ಮಾರ್ಗ ನಾಗರಕಟ್ಟೆ, ಸೊಕ್ಕೆ, ಚಿಕ್ಕಬಂಟನಹಳ್ಳಿ | 5.50 |
| 24. | ಅಣಜಿ–ಸೊಕ್ಕೆ ರಸ್ತೆ ಮಾರ್ಗ ಕುರುಡಿ, ಮರುಕುಂಟೆ, ಪಲ್ಲಾಗಟ್ಟೆ | 4.50 |
| 25. | ಜಗಳೂರು–ಹಿರೇಮೇಗಳಗೆರೆ ರಸ್ತೆ ಪಲ್ಲಾಗಟ್ಟಿ, ಉಚ್ಚಂಗಿದುರ್ಗ | 27.00 |
| 26. | ರಾಜ್ಯಹೆದ್ದಾರಿ–45ರಿಂದ ಚಿಕ್ಕಮಲ್ಲನಹೊಳೆ ಮಾರ್ಗ ಗೌರೀಪುರ, ಹುಚ್ಚವ್ವನ ಹಳ್ಳಿ | 22.00 |
| 27. | ದೇವಿಕೆರೆ–ಪಲ್ಲಾಗಟ್ಟಿ ರಸ್ತೆ ಮಾರ್ಗ ಸೊರಡ್ಡಿಹಳ್ಳಿ | 12.00 |

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 28. | ಜಗಳೂರು–ಜಮ್ಮಾಪುರ ರಸ್ತೆ | 9.00 |
| 29. | ರಾಜ್ಯ ಹೆದ್ದಾರಿ–65ರಿಂದ ಕೆಚ್ಚೇನಹಳ್ಳಿ(ರಾಜ್ಯ ಹೆದ್ದಾರಿ–45) ಮಾರ್ಗ ಮದಿಕೇರೆನಹಳ್ಳಿ ಐಯ್ಯನಹಳ್ಳಿ ರಸ್ತೆ | 16.00 |
| 30. | ಮುಗ್ಗಿದ ರಾಗಿಹಳ್ಳಿ ಮುಚ್ಚನೂರು ರಸ್ತೆ ಮಾರ್ಗ ಹಾಲೇಕಲ್ಲು | 8.00 |
| 31. | ರಂಗಾಪುರ ಗಡಿಮಾಕುಂಟೆ ರಸ್ತೆ ಮಾರ್ಗ ಗೌರಮ್ಮನಹಳ್ಳಿ | 22.00 |
| 32. | ಹಿರೇಮಲ್ಲನಹೊಳೆ ಹುಚ್ಚವ್ವನಹಳ್ಳಿ ರಸ್ತೆ | 4.00 |
| | **ಒಟ್ಟು** | **130.00** |
| | **ಚಿಕ್ಕಮಗಳೂರು ಜಿಲ್ಲೆ** | |
| | **ತರೀಕೆರೆ ತಾಲ್ಲೂಕು(ಬೀರೂರು ವಿ.ಸ)** | |
| 33. | ತರೀಕೆರೆ ತಾಲ್ಲೂಕು ಗೂಳ್ಳೂರು ಮನೆ–ಬಿ.ಟಿ.ರಸ್ತೆಯಿಂದ ಮಲ್ಲಿಗೆಹಳ್ಳಿ ರಸ್ತೆ | 4.00 |
| | **ಒಟ್ಟು** | **4.00** |
| | **ಮೈಸೂರು ಜಿಲ್ಲೆ** | |
| | **ನಂಜನಗೂಡು ತಾಲ್ಲೂಕು(ವರುಣಾ ವಿ.ಸ)** | |
| 34. | ಮಡಹಳ್ಳಿಯಿಂದ ಬದನವಾಳಿಗೆ ಅಳಗಂಚಿ, ದೇವನೂರು ಮಾರ್ಗವಾಗಿ ಸೇರುವ ರಸ್ತೆ (ಎಸ್.ಹೆಚ್.57ರಿಂದ 80) | 6.40 |
| 35. | ತಗಡೂರಿನಿಂದ ಕಾರೆಪುರಕ್ಕೆ ಚಿನ್ನಂಬಳ್ಳಿ ಕಾರ್ಯ ಮಾರ್ಗವಾಗಿ ಸೇರುವ ರಸ್ತೆ (ಎಸ್.ಹೆಚ್.57ರಿಂದ 57ಗೆ) | 9.00 |
| 36. | ಹನುಮನಪುರದಿಂದ ಪಿ.ಮರಹಳ್ಳಿ–ಅವತಾಳಪುರ ಮಾರ್ಗ ದೊಡ್ಡಹೊಮ್ಮ ಸೇರುವ ರಸ್ತೆ | 8.00 |
| 37. | ಎಸ್.ಹೆಚ್.80ರಿಂದ ಎಸ್.ಹೆಚ್.80ಗೆ ಕೊಣನೂರು–ಕೊಣನುಪುರ–ಕೊಣನೂರುಪಾಳ್ಯ ರಸ್ತೆ | 5.00 |
| 38. | ಸಿರಾ–ನಂಜನಗೂಡು ರಸ್ತೆಯಿಂದ ಬಿಳಿಗೆರೆ ಸೋನಹಳ್ಳಿ–ಸಣ್ಣಮಲ್ಲಪುರ–ಕಿರುಗುಂದ ಮಾರ್ಗವಾಗಿ ಮಡಹಳ್ಳಿಗೆ ಸೇರುವ ರಸ್ತೆ(ಎಸ್.ಹೆಚ್.84ರಿಂದ 57) | 7.00 |
| 39. | ದಾಸನೂರಿನಿಂದ ದೊಡ್ಡಹೊಮ್ಮ ಚಿಕ್ಕಹೊಮ್ಮ ಮಾರ್ಗವಾಗಿ ತೊರವಳ್ಳಿಗೆ ಸೇರುವ ರಸ್ತೆ | 6.40 |
| 40. | ಹೊಸಕೋಟೆಯಿಂದ ತುಂನೇರಳೆ ಮಾರ್ಗವಾಗಿ ಮರಡಿಹುಂಡಿ ಸೇರುವ ರಸ್ತೆ (ಎಸ್.ಹೆಚ್.84ಎ ರಿಂದ ಮಾರಡಿಹುಂಡಿ ಸೇರುವ ರಸ್ತೆ) | 5.00 |
| 41. | ಎನ್.ಟಿ.ಎನ್.ರಸ್ತೆಯಿಂದ ಜಿ.ಮರಹಳ್ಳಿ–ಬಿಳಗುಲಿ ಮಾರ್ಗ ಸಾಲುಂಡಿ (ಜೋಡಿಹರಿಪುರ)ಕ್ಕೆ ಸೇರುವ ರಸ್ತೆ | 6.00 |
| 42. | ದೇವನೂರಿನಿಂದ ವರಹಳ್ಳಿ ಮಾರ್ಗವಾಗಿ ತಗಡೂರಿಗೆ ಸೇರುವ ರಸ್ತೆ (ಎಂಡಿಆರ್ ರಿಂದ ಎಸ್.ಹೆಚ್.57 ಸೇರುವ ರಸ್ತೆ) | 4.00 |
| 43. | ಸಿರಾ–ನಂಜನಗೂಡು ಎಸ್.ಹೆಚ್.84 ರಸ್ತೆಯಿಂದ ಆಲಂಬೂರು–ಮಂಟಿ ಮಾರ್ಗವಾಗಿ ಬಾಗಲಕೋಟೆ–ಬಿಳಿಗಿರಿರಂಗನಬೆಟ್ಟ ಎಸ್.ಹೆಚ್.57 ಸೇರುವ ರಸ್ತೆ | 3.00 |
| | **ಒಟ್ಟು** | **59.80** |
| | **ಮೈಸೂರು ತಾಲ್ಲೂಕು(ಚಾಮುಂಡೇಶ್ವರಿ ವಿ.ಸ)** | |
| 44. | ತಿಬ್ಬಯ್ಯನಹುಂಡಿಯಿಂದ ಜೀವನಭೀಮನಗರ ಸೇರುವ ರಸ್ತೆ (ಎಲ್.ಐ.ಸಿ. ಕಾಲೋನಿ) ಮಾರ್ಗ ಮೂಗನಹುಂಡಿ ಲಿಂಗಾಬೂದಿಪಾಳ್ಯ | 7.80 |
| | **ಒಟ್ಟು** | **7.80** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.545

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ವಿ. ವಿಜಯಕುಮಾರ್, ಪಿ.ಎಸ್.ಐ. (ಸಿವಿಲ್) ದೇವನಹಳ್ಳಿ ಪೊಲೀಸ್ ಠಾಣೆ ರವರ ಪರಿವೀಕ್ಷಣಾ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ:** 1) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಆದೇಶ ಸಂಖ್ಯೆ:8/ನೇಮಕಾತಿ/2000–01, ದಿನಾಂಕ 20–12–2001.

2) ಡಿಜಿ ಮತ್ತು ಐಜಿಪಿ, ಬೆಂಗಳೂರು ಇವರ ಪತ್ರ ಸಂಖ್ಯೆ:93/ಸಿಬ್ಬಂದಿ–1/2008–09, ದಿನಾಂಕ 05–01–2009.

**ಪ್ರಸ್ತಾವನೆ:**

ಶ್ರೀ ವಿ. ವಿಜಯಕುಮಾರ್, ಪಿಎಸ್ಐ, ದೇವನಹಳ್ಳಿ ಇವರು ಮೇಲ್ ಓದಲಾದ (1) ರಲ್ಲಿನ ಡಿಜಿ ಮತ್ತು ಐಜಿಪಿ ರವರ ಆದೇಶದನ್ವಯ ದಿನಾಂಕ 31–12–2001 ರಂದು ಸೇವಾ ನಿರತ ಪಿಎಸ್ಐ ಆಗಿ ನೇಮಕಗೊಂಡಿದ್ದು, ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು 2½ ವರ್ಷಗಳ ಪರಿವೀಕ್ಷಣಾ ಅವಧಿಯನ್ನು ಪೂರ್ಣಗೊಳಿಸಿರುತ್ತಾರೆ. ಆದರೆ ಹುದ್ದೆಗೆ ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಕರ್ನಾಟಕ ಸಿವಿಲ್ ಸೇವಾ ನಿಯಮಗಳು (ಸೇವೆ & ಕನ್ನಡ ಭಾಷೆ ಪರೀಕ್ಷೆಗಳು), 1974 ರನ್ವಯ ನಿಗಧಿಪಡಿಸಲಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಖಾಯಂಪೂರ್ವ ಅವಧಿಯೊಳಗೆ ಉತ್ತೀರ್ಣರಾಗಿರುವುದಿಲ್ಲ. ಎಸ್.ಎಸ್.ಎಲ್.ಸಿ. ಯಲ್ಲಿ ಕನ್ನಡವನ್ನು ಪ್ರಥಮ ಭಾಷಾ ವಿಷಯವನ್ನಾಗಿ ಅಭ್ಯಾಸಮಾಡಿದ್ದು, ಕನ್ನಡ ಭಾಷಾ ಪರೀಕ್ಷೆಗೆ ವಿನಾಯ್ತಿ ಪಡೆಸಿರುತ್ತಾರೆ. ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ / ನ್ಯಾಯಾಂಗ ನಡವಳಿ/ಚಾಲ್ತಿ ಶಿಕ್ಷೆ ಇರುವುದಿಲ್ಲವಾದ್ದರಿಂದ ಹಾಗೂ ಸೇವೆಯಲ್ಲಿ ಮುಂದುವರೆಸಲು ಅರ್ಹರೆಂದು ಕಂಡು ಬಂದಿರುವುದರಿಂದ ಅಕೌಂಟ್ಸ್ ಹೈಯರ್ ಪರೀಕ್ಷೆ ನಡೆದ ದಿನಾಂಕದವರೆಗೆ ಇವರ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸಲು ಮೇಲೆ ಓದಲಾದ (2) ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ. ಸದರಿಯವರು ದಿನಾಂಕ 09–06–2007 ರಂದು ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ ಇವರ ಪರಿವೀಕ್ಷಣಾ ಅವಧಿಯನ್ನು 2½ ವರ್ಷಗಳ ಪರಿವೀಕ್ಷಣಾ ಅವಧಿ ಮುಕ್ತಾಯಗೊಂಡ ದಿನಾಂಕದಿಂದ ಅಂದರೆ ದಿನಾಂಕ 01–10–2005 ರಿಂದ 09–06–2007 ರವರೆಗೆ ವಿಸ್ತರಿಸುವಂತೆಯೂ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 14 ಪೊಸಇ 2009, ಬೆಂಗಳೂರು, ದಿನಾಂಕ 9ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ಶ್ರೀ ವಿ. ವಿಜಯಕುಮಾರ್, ಪಿ.ಎಸ್.ಐ. ದೇವನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 01–10–2005 ರಿಂದ 09–06–2007 ರವರೆಗೆ ವಿಸ್ತರಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.573

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ರಾಮಕೃಷ್ಣ, ಪೊಲೀಸ್ ಉಪಾಧೀಕ್ಷಕರು, ಸಿ.ಓ.ಡಿ. ಬೆಂಗಳೂರು ರವರು ಅಕ್ರಮ ಆಸ್ತಿ ಹೊಂದಿರುವವರೆಂಬ ಕರ್ನಾಟಕ ಲೋಕಾಯುಕ್ತ ರವರ ವರದಿ – ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ)/ ಬಿಡಿ–44/ಸಿಆರ್–4/ 2008/ ರಾಮನಗರ, ದಿನಾಂಕ 16–07–2008 ಮತ್ತು 18–10–2008.

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ ಶ್ರೀ ಎಂ. ರಾಮಕೃಷ್ಣ, ಪೊಲೀಸ್ ಉಪಾಧೀಕ್ಷಕರು, ಸಿ.ಓ.ಡಿ. ಬೆಂಗಳೂರು ರವರು ನಿಗಧಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದರ ಬಗ್ಗೆ ಖಚಿತ ಮಾಹಿತಿಯ ಹಿನ್ನೆಲೆಯಲ್ಲಿ ಅವರ ವಿರುದ್ಧ ಬೆಂಗಳೂರು

ಗ್ರಾಮಾಂತರ ಜಿಲ್ಲೆ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊ.ಸಂ.4/2008ರ ಕಲಂ 13(1)(ಇ) r/w 13(2)ರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ರೀತ್ಯಾ ಪ್ರಕರಣವನ್ನು ದಾಖಲಿಸಿಕೊಳ್ಳಲಾಯಿತು. ದಾಖಲಿಸಿಕೊಂಡ ನಂತರ ದಿನಾಂಕ 27–06–2008ರಂದು ಜಿಲ್ಲಾ ಪ್ರಧಾನ ಸತ್ರ ಮತ್ತು ವಿಶೇಷ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರಿಂದ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು ಪಡೆದುಕೊಂಡು ದಿನಾಂಕ 27–06–2008 ರಂದು ಆರೋಪಿತರ ಮನೆ, ಕಛೇರಿ ಮತ್ತು ಅವರ ಸ್ವಂತ ಗ್ರಾಮವಾದ ಹೊಸಕೋಟೆ ತಾಲ್ಲೂಕಿನ ಮನೆ, ಮುಂತಾದ ಸ್ಥಳಗಳ ಮೇಲೆ ಪಂಚಸಾಕ್ಷಿಗಳ ಸಕ್ಷಮ ಶೋಧಿಸಿದಾಗ ಅಪಾರ ಮೊತ್ತದ ಸ್ಥಿರ–ಚರಾಸ್ಥಿ ದೊರೆತಿರುತ್ತವೆ. ಪ್ರಾಥಮಿಕ ತನಿಖೆಯಿಂದ ಆರೋಪಿತರು ಅವರ ಬಲ್ಲ ಮೂಲಗಳಿಗಿಂತ ಹೊಂದಿರುವ ಅಕ್ರಮ ಆಸ್ತಿಗಳ ಮೌಲ್ಯ ರೂ.10,31,56,623=00 ಆಗಿರುತ್ತದೆ. ಸದರಿ ಹೆಚ್ಚುವರಿ ಅಕ್ರಮ ಮೂಲಗಳಿಂದ ಗಳಿಸಿರುವ ಚರ–ಸ್ಥಿರ ಆಸ್ತಿಗಳ ಮೌಲ್ಯವು ಆರೋಪಿತ ಸರ್ಕಾರಿ ನೌಕರ ಶೋಧನಾ ಅವಧಿಯಲ್ಲಿ ನಿಗಧಿತ ಮೂಲಗಳಿಂದ ಗಳಿಸಿರುವ ವರಮಾನಕ್ಕಿಂತ ಹೆಚ್ಚಿನ ಮೊತ್ತವಾಗಿರುತ್ತದೆ. ಅಲ್ಲದೆ, ಆರೋಪಿತರು, ವಿವಿಧ ಬಾಬ್ತುಗಳಿಗಾಗಿ ಮಾಡಿರುವ ಖರ್ಚು–ವೆಚ್ಚಗಳು ಇನ್ನೂ ಕೆಲವು ಮೂಲಗಳಿಂದ ಬರಬೇಕಾಗಿದೆ. ಇದರಿಂದ ಭವಿಷ್ಯದಲ್ಲಿ ಪ್ರಕರಣದ ತನಿಖೆ ಮುಂದುವರೆದಂತೆ ಹೆಚ್ಚಿನ ಚರ–ಸ್ಥಿರಾಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟಾರೆ ಮೌಲ್ಯವು ಇನ್ನೂ ಹೆಚ್ಚಾಗುವ ಸಂಭವವಿರುತ್ತದೆ. ಈ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ದಾಖಲೆ / ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತೆ ಹಾಗೂ ಅವರ ಲೀನ್ ಅನ್ನು ಬೇರೆಡೆಗೆ ಸ್ಥಳಾಂತರಿಸುವಂತೆ ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆ ಹಾಗೂ ವರದಿಗಳನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 266 ಪೊಸಿಪ 2008, ಬೆಂಗಳೂರು, ದಿನಾಂಕ 24ನೇ ಫೆಬ್ರವರಿ 2009.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ರಾಮಕೃಷ್ಣ, ಪೊಲೀಸ್ ಉಪಾಧೀಕ್ಷಕರು, ಸಿ.ಓ.ಡಿ. ಬೆಂಗಳೂರು ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ. ಇವರ ಲೀನ್ ಅನ್ನು ರಾಜ್ಯ ಗುಪ್ತವಾರ್ತೆ ಇಲ್ಲಿನ ಡಿವೈ.ಎಸ್.ಪಿ. ಹುದ್ದೆಗೆ ಸ್ಥಳಾಂತರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ. ರಾಮಕೃಷ್ಣ, ಪೊಲೀಸ್ ಉಪಾಧೀಕ್ಷಕರು ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ. ರಾಮಕೃಷ್ಣ, ಪೊಲೀಸ್ ಉಪಾಧೀಕ್ಷಕರು ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 739

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ. ಹನುಮೇಶ್, ಡಿವೈ.ಎಸ್.ಪಿ. ರವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ(5)/63/08–09, ದಿನಾಂಕ 29–01–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಜಿ. ಹನುಮೇಶ್, ಡಿವೈ.ಎಸ್.ಪಿ. ರವರು ದಿನಾಂಕ 10–01–2009 ರಂದು ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ ರವರು ನಡೆಸಿದ ಮಾಸಿಕ ಅಪರಾಧ ಸಭೆಯಲ್ಲಿ ರಾಯಚೂರು ಗ್ರಾಮೀಣ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 8/2009 ಕಲಂ 394 ಐಪಿಸಿ ಪ್ರಕರಣಕ್ಕೆ ಸಂಬಂಧಿಸಿದಂತೆ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆರವರೊಡನೆ ಅಶಿಸ್ತಿನಿಂದ ಮತ್ತು ಅಸಭ್ಯವಾಗಿ ವರ್ತಿಸಿ, ದುರ್ನಡತೆ ಪ್ರದರ್ಶಿಸಿರುವುದು ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ ರವರ ಪತ್ರ ದಿನಾಂಕ 10–01–2009 ರಂತೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆಗೆ ಕೆ.ಎಸ್.ಪಿ. (ಡಿಪಿ) ನಿಯಮ, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಪ್ರಾಂಶುಪಾಲರು, ಪಿಟಿಸಿ, ನಾಗೇನಹಳ್ಳಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 80 ಪೊಸಿಪ 2009, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಜಿ. ಹನುಮೇಶ್, ಡಿವೈ.ಎಸ್.ಪಿ. ರಾಯಚೂರು ಉಪ ವಿಭಾಗ ರವರ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮಗಳು, 1965ರ ನಿಯಮ 6 ರನ್ವಯ ಇಲಾಖಾ ವಿಚಾರಣೆಗೆ ಆದೇಶಿಸಿದೆ. ಪ್ರಾಂಶುಪಾಲರು, ಪಿಟಿಸಿ, ನಾಗೇನಹಳ್ಳಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಈ ಸಂಬಂಧ ದೋಷಾರೋಪಣಾ ಪತ್ರವನ್ನು ಸಹ ಹೊರಡಿಸಲಾಗಿದೆ. ವಿಚಾರಣೆಯನ್ನು ನಿಯಮಾನುಸಾರ ನಡೆಸಿ ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.842

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್. ಆನಂದ್, ಡಿವೈ.ಎಸ್.ಪಿ. ಮತ್ತು ಶ್ರೀ ಕೆ.ವಿ.ಕೆ. ರೆಡ್ಡಿ, ಡಿವೈ.ಎಸ್.ಪಿ. ಇವರ ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008, ದಿನಾಂಕ 27–08–2008.

2) ದಿನಾಂಕ 12–12–2008 ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ: 4750/2008 ರಲ್ಲಿ ನೀಡಿರುವ ತೀರ್ಪು.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ರಲ್ಲಿ ಡಿವೈ.ಎಸ್.ಪಿ (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ ಕೆ.ವಿ.ಕೆ. ರೆಡ್ಡಿ, ಎ.ಸಿ.ಪಿ, ವಿಜಯನಗರ ಉಪ ವಿಭಾಗ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇಲ್ಲಿಗೆ ಹಾಗೂ ಶ್ರೀ ಆರ್. ಆನಂದ್, ಡಿವೈ.ಎಸ್.ಪಿ. ಸಿ.ಓ.ಡಿ, ಬೆಂಗಳೂರು ಇವರನ್ನು ಎ.ಸಿ.ಪಿ, ವಿಜಯನಗರ ಉಪ ವಿಭಾಗ, ಬೆಂಗಳೂರು ಇಲ್ಲಿಗೆ ವರ್ಗಾಯಿಸಲಾಗಿತ್ತು. ಸದರಿ ವರ್ಗಾವಣೆಯ ವಿರುದ್ಧ ಶ್ರೀ ಆರ್. ಆನಂದ್ ರವರು ಕೆ.ಎಡಿ.ಯಲ್ಲಿ ಅರ್ಜಿ ಸಂಖ್ಯೆ: 4750/2008 ಸಲ್ಲಿಸಿದ್ದು ಕೆ.ಎ.ಟಿ.ಯು ತೀರ್ಪು ನೀಡಿದ್ದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 4750/2008ರ ದಿನಾಂಕ 12–12–2008ರಲ್ಲಿ ಸುದೀರ್ಘವಾದ ತೀರ್ಪು ನೀಡಿದ್ದು, ತೀರ್ಪಿನ ಉದ್ಧೃತ ಭಾಗ ಕೆಳಕಂಡಂತಿದೆ.

> " xxx 17. For the reasons and circumstances narrated above, we hereby quash the impugned order dated 03-10-2008 Annexure A7 passed by the first Respondent. We hereby direct the Cadre Management Authority to pass appropriate orders afresh in accordance with law keeping in mind the direction issued by this Tribunal in A.No.3904/2008 and also the order passed in W.P.No.11112/2008 passed by the Hon'ble High Court of Karnataka apart from the transfer guidelines within four weeks from the date of receipt of a certified copy of this order giving opportunities of being heard to the parties concerned. Parties to bear their own costs."

ದಿನಾಂಕ 17–02–2009 ರಂದು ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯಲ್ಲಿ ತೀರ್ಮಾನಿಸಿದಂತೆ ಶ್ರೀ ಆರ್. ಆನಂದ್ ಮತ್ತು ಶ್ರೀ ಕೆ.ವಿ.ಕೆ. ರೆಡ್ಡಿ ಇವರನ್ನು ಖುದ್ದಾಗಿ ವೃಂದ ನಿರ್ವಹಣಾ ಪ್ರಾಧಿಕಾರದ ಮುಂದೆ ಹಾಜರಾಗಲು ಸೂಚಿಸಿದ್ದರ ಮೇರೆಗೆ ಈ ಅಧಿಕಾರಿಗಳು ಹಾಜರಾಗಿರುತ್ತಾರೆ. ಶ್ರೀ ಆರ್. ಆನಂದ್, ಡಿವೈ.ಎಸ್.ಪಿ. ರವರು ಸಭೆಯ ಮುಂದೆ ಹಾಜರಾಗಿ ತಮ್ಮ 32 ವರ್ಷದ ಸೇವಾ ಅವಧಿಯಲ್ಲಿ ರಾಜ್ಯದ ವಿವಿಧ ಭಾಗಗಳಲ್ಲಿ ಕಾರ್ಯನಿರ್ವಹಿಸಿದ್ದು, ಎರಡು ಬಾರಿ ಸಿ.ಓ.ಡಿ. ಘಟಕದಲ್ಲಿ ಉಪ ನಿರೀಕ್ಷಕ ಮತ್ತು ಪೊಲೀಸ್ ನಿರೀಕ್ಷಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿರುವುದಾಗಿಯೂ ಕಳೆದ 2 ವರ್ಷಗಳಿಂದ ಸಿ.ಓ.ಡಿ. ಘಟಕದಲ್ಲಿ ಡಿವೈ.ಎಸ್.ಪಿ. ವೃಂದದಲ್ಲಿ ಕಾರ್ಯನಿರ್ವಹಿಸಿದ್ದು, ತಮ್ಮ ಸೇವಾವಧಿಯಲ್ಲಿ ಬೆಂಗಳೂರು ನಗರದ ಉಪ ವಿಭಾಗದಲ್ಲಿ ಕಾರ್ಯಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಮುಂದುವರೆದು, ಮೊದಲ ಬಾರಿಗೆ ತಮಗೆ ಉಪ ವಿಭಾಗದ ನೇಮಕಾತಿ ನೀಡಿ ವಿಜಯನಗರ ಉಪ ವಿಭಾಗದಲ್ಲಿ ಕೇವಲ 1½ ತಿಂಗಳು ಕಾರ್ಯನಿರ್ವಹಿಸಿದ್ದು, ಮತ್ತೊಂದು ಆದೇಶ ಹೊರಡಿಸಿ ತಮ್ಮನ್ನು ಬದಲಾಯಿಸಿರುವುದಾಗಿಯೂ, ತಮ್ಮ ಸ್ಥಳಕ್ಕೆ ನೇಮಿಸಿದ ಶ್ರೀ ಕೆ.ವಿ.ಕೆ. ರೆಡ್ಡಿ ರವರು ಹೆಚ್ಚು ಕಾಲ ಬೆಂಗಳೂರಿನಲ್ಲಿಯೇ ಕಾರ್ಯನಿರ್ವಹಿಸಿರುವುದಾಗಿ ತಿಳಿಸಿ ತಾವು ನಿವೃತ್ತಿಯಾಗಲು 1½ ವರ್ಷಗಳು ಉಳಿದಿದ್ದು, ಈ ಅವಧಿಯಲ್ಲಿ ಯಾವುದಾದರೂ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸಲು

ಇಚ್ಛಿಸಿದ್ದು, ವಿಜಯನಗರ ಉಪ ವಿಭಾಗವಲ್ಲದಿದ್ದರೂ ಬೇರೆ ಉಪ ವಿಭಾಗಗಳಲ್ಲಿ ನೇಮಿಸಿದರೂ ಕಾರ್ಯನಿರ್ವಹಿಸುವುದಾಗಿ ಪ್ರಾಧಿಕಾರದ ಮುಂದೆ ತಿಳಿಸಿದರು.

ಶ್ರೀ ಕೆ.ವಿ.ಕೆ. ರೆಡ್ಡಿ, ಎ.ಸಿ.ಪಿ. ರವರು ತಮ್ಮನ್ನು ದಿನಾಂಕ 11-08-2008ರ ಆದೇಶದನ್ವಯ ವಿಜಯನಗರ ಉಪ ವಿಭಾಗದಿಂದ ವರ್ಗಾಯಿಸಲಾಗಿದ್ದು, ಕೆ.ಎ.ಟಿ.ಯಲ್ಲಿ ತಾವು ಸಹ ಅರ್ಜಿಯನ್ನು ಸಲ್ಲಿಸಿದ್ದುದಾಗಿಯೂ, ದಿನಾಂಕ 3-10-2008ರ ಆದೇಶದಲ್ಲಿ ತಮ್ಮನ್ನು ಎ.ಸಿ.ಪಿ. ವಿಜಯನಗರ ಉಪ ವಿಭಾಗ ಇಲ್ಲಿಯೇ ಮುಂದುವರೆಸಲಾಗಿತ್ತು. ಇದರನ್ವಯ ತಾವು ವಿಜಯನಗರ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಶ್ರೀ ಆರ್. ಆನಂದ್ ರವರನ್ನು ಸಿ.ಓ.ಡಿ.ಗೆ ನೇಮಿಸಲಾಗಿದ್ದು, ಇವರಿಗೂ ಸಹ ಬೆಂಗಳೂರಿನಲ್ಲಿಯೇ ನೇಮಕಾತಿ ನೀಡಿರುವುದರಿಂದ ಅವರ ಕೇಂದ್ರ ಸ್ಥಾನ ಬದಲಾಗಿರುವುದಿಲ್ಲವೆಂದೂ, ಆದುದರಿಂದ ದಿನಾಂಕ 3-10-2008ರ ಆದೇಶದನ್ವಯ ತಮ್ಮನ್ನು ವಿಜಯನಗರ ಉಪ ವಿಭಾಗದಲ್ಲಿ ಮುಂದುವರೆಸಲು ಕೋರಿರುತ್ತಾರೆ.

ಕೆ.ಎ.ಟಿ. ಅರ್ಜಿ ಸಂಖ್ಯೆ: 4750/2008 ರಲ್ಲಿ ಮಾನ್ಯ ಕೆ.ಎ.ಟಿ.ಯು ದಿನಾಂಕ 12-12-2008 ರಂದು ನೀಡಿದ ತೀರ್ಪಿನ ಅನ್ವಯ ವೃಂದ ನಿರ್ವಹಣಾ ಪ್ರಾಧಿಕಾರವು ವಿವರವಾಗಿ ಚರ್ಚಿಸಿತು. ಶ್ರೀ ಆರ್. ಆನಂದ್ ರವರು ವೃಂದ ನಿರ್ವಹಣಾ ಪ್ರಾಧಿಕಾರದ ಮುಂದೆ ಅವರು ಬೇರೆ ಉಪ ವಿಭಾಗದಲ್ಲೂ ಕಾರ್ಯನಿರ್ವಹಿಸಲು ಸಿದ್ಧರಿರುವುದಾಗಿ ಸಲ್ಲಿಸಿದ ಹೇಳಿಕೆಯನ್ನು ಗಮನಿಸಿ ಹಾಗೂ ಇವರಿಗೆ ಉಪ ವಿಭಾಗದಲ್ಲಿ ಸ್ಥಳನಿಯುಕ್ತಿಗೊಳಿಸುವ ಬಗ್ಗೆ ಪರಿಗಣಿಸಿ ವೃಂದ ನಿರ್ವಹಣಾ ಪ್ರಾಧಿಕಾರವು ಕೆಳಕಂಡಂತೆ ಶಿಫಾರಸ್ಸು ಮಾಡಿತು.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀಯುತರು: | ವರ್ಗಾಯಿಸಿ ಸ್ಥಳನಿಯುಕ್ತಿಗೊಳಿಸಿದ ಹುದ್ದೆ |
|---|---|---|
| 1. | ಶ್ರೀ ಆರ್. ಆನಂದ್,<br>ಡಿವೈ.ಎಸ್.ಪಿ. ಸಿ.ಓ.ಡಿಗೆ ವರ್ಗಾವಣೆಯ ಆದೇಶದಲ್ಲಿರುವವರು | ಡಿವೈ.ಎಸ್.ಪಿ. ಮಧುಗಿರಿ ಉಪ ವಿಭಾಗ,<br>ಶ್ರೀ ಜಿ.ಕೆ. ಚನ್ನಬಸಪ್ಪ ಇವರ ಸ್ಥಾನದಲ್ಲಿ |
| 2 | ಶ್ರೀ ಕೆ.ವಿ.ಕೆ. ರೆಡ್ಡಿ,<br>ಎ.ಸಿ.ಪಿ, ವಿಜಯನಗರ ಉಪ ವಿಭಾಗ,<br>ಬೆಂಗಳೂರು ನಗರ | ಎ.ಸಿ.ಪಿ, ವಿಜಯನಗರ ಉಪ ವಿಭಾಗ,<br>ಬೆಂಗಳೂರು ನಗರ ಇಲ್ಲಿಯೇ<br>ಮುಂದುವರೆಸಲಾಗಿದೆ. |

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರಗಳ ಶಿಫಾರಸ್ಸನ್ನು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 82 ಪೊಸಿಪ 2009, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009.**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ ಶ್ರೀ ಆರ್. ಆನಂದ್, ಡಿವೈ.ಎಸ್.ಪಿ ಮತ್ತು ಶ್ರೀ ಕೆ.ವಿ.ಕೆ.ರೆಡ್ಡಿ, ಡಿವೈ.ಎಸ್.ಪಿ. ಇವರುಗಳು ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯ ಮುಂದೆ ನೀಡಿರುವ ಹೇಳಿಕೆಯನ್ನು ಪರಿಗಣಿಸಿ ದಿನಾಂಕ 27-08-2008ರ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಭಾಗಶ: ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀಯುತರು: | ವರ್ಗಾಯಿಸಿ ಸ್ಥಳನಿಯುಕ್ತಿಗೊಳಿಸಿದ ಹುದ್ದೆ |
|---|---|---|
| 1. | ಶ್ರೀ ಆರ್. ಆನಂದ್,<br>ಡಿವೈ.ಎಸ್.ಪಿ. ಸಿ.ಓ.ಡಿ.ಗೆ ವರ್ಗಾವಣೆಯ ಆದೇಶದಲ್ಲಿರುವವರು | ಡಿವೈ.ಎಸ್.ಪಿ. ಮಧುಗಿರಿ ಉಪ ವಿಭಾಗ,<br>ಶ್ರೀ ಜಿ.ಕೆ. ಚನ್ನಬಸಪ್ಪ ಇವರ ಸ್ಥಾನದಲ್ಲಿ |
| 2 | ಶ್ರೀ ಕೆ.ವಿ.ಕೆ. ರೆಡ್ಡಿ,<br>ಎ.ಸಿ.ಪಿ, ವಿಜಯನಗರ ಉಪ ವಿಭಾಗ,<br>ಬೆಂಗಳೂರು ನಗರ | ಎ.ಸಿ.ಪಿ, ವಿಜಯನಗರ ಉಪ ವಿಭಾಗ,<br>ಬೆಂಗಳೂರು ನಗರ ಇಲ್ಲಿಯೇ<br>ಮುಂದುವರೆಸಲಾಗಿದೆ. |

ಈ ಅಧಿಸೂಚನೆಯನ್ನು ಮಾನ್ಯ ಮುಖ್ಯಮಂತ್ರಿಯವರು ಸಂಖ್ಯೆ: ಪಿಎಸ್‌ಸಿಎಂ/ ಎಫ್.1258/2009, ದಿನಾಂಕ 26–02–2009 ರಲ್ಲಿ ಅನುಮೋದಿಸಿದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.743

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಸೈಲಾನಿ ದಲಾಯತ್, ಸಹಕಾರ ಇಲಾಖೆ ಇವರ ಸೇವೆಯನ್ನು ಖಾಯಂ ಆಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ವರ್ಗಾಯಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ :**

1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ ಸಿಶಾ–1/165/2003–04, ದಿನಾಂಕ 20–9–2006 ಮತ್ತು 12–1–09.
2. ಸಹಕಾರ ಸಂಘಗಳ ನಿಬಂಧಕರು ಇವರ ಪತ್ರ ಸಂ: ಸಿಬ್ಬಂದಿ/225/ಇಎನ್‌ಪಿ/2005–06, ದಿನಾಂಕ 31–8–2006 ಮತ್ತು 23–12–2008.
3. ಶ್ರೀ ಸೈಲಾನಿ ದಲಾಯತ್, ಸಹಕಾರ ಇಲಾಖೆ ಇವರ ಒಪ್ಪಿಗೆ ಪತ್ರ ದಿನಾಂಕ 24–6–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ 20–9–2006ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಕೊಪ್ಪಳ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ದಲಾಯತ್ ಹುದ್ದೆಯಲ್ಲಿ ನಿಯೋಜನೆಯ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಸೈಲಾನಿ, ದಲಾಯತ್, ಸಹಕಾರ ಇಲಾಖೆ ಇವರನ್ನು ಖಾಯಂ ಆಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ವರ್ಗಾಯಿಸುವ ಬಗ್ಗೆ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ 31–8–2006 ಸಹಕಾರ ಸಂಘಗಳ ನಿಬಂಧಕರು ಪತ್ರದಲ್ಲಿ ಶ್ರೀ ಸೈಲಾನಿ ದಲಾಯತ್ ಇವರನ್ನು ಖಾಯಂ ಆಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ವರ್ಗಾಯಿಸಿಕೊಳ್ಳುವ ಬಗ್ಗೆ ತಮ್ಮ ಒಪ್ಪಿಗೆಯನ್ನು ನೀಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾಗಿರುವ ದಿನಾಂಕ 24–6–2008 ಪತ್ರದಲ್ಲಿ ಶ್ರೀ ಸೈಲಾನಿ ದಲಾಯತ್, ಸಹಕಾರ ಇಲಾಖೆ ಇವರು ಖಾಯಂ ಆಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ವರ್ಗಾವಣೆಗೊಳ್ಳುವ ಬಗ್ಗೆ ತಮ್ಮ ಒಪ್ಪಿಗೆಯನ್ನು ನೀಡಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 245 ಪಿಪಿಇ 2008, ದಿನಾಂಕ: 6ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(ಎ)(ii)ರ ರೀತ್ಯಾ ಶ್ರೀ ಸೈಲಾನಿ ದಲಾಯತ್, ಸಹಕಾರ ಇಲಾಖೆ ಇವರ ಸೇವೆಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂ ಆಗಿ ವರ್ಗಾಯಿಸಿದೆ.

ಈ ಆದೇಶವನ್ನು ಸಿಆಸುಇ (ಸೇವಾನಿಯಮಗಳು–ಎ) ಟಿಪ್ಪಣಿ ಸಂ: ಸಿಆಸುಇ 354 ಸೇನಿಎ 2008, ದಿನಾಂಕ 26–8–2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1161

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ. ಮತ್ತು ಸು., ಕಾಫಿಪೋಸ ಮತ್ತು ಅಭಿಯೋಗಗಳು)

**ತಿದ್ದುಪಡಿ**

**ನಂ: ಒಇ 429 ಪಿಪಿಇ 2008, ಬೆಂಗಳೂರು, ದಿನಾಂಕ: 9ನೇ ಏಪ್ರಿಲ್ 2009**

ಸರ್ಕಾರದ ಆದೇಶ ನಂ. ಒಇ 429 ಪಿಪಿಇ 2008, ದಿನಾಂಕ 19–3–2009ರ ವಿಷಯದ ಎರಡನೇ ಸಾಲಿನಲ್ಲಿ, ಪ್ರಸ್ತಾವನೆಯ ಮೊದಲನೇ ಕಂಡಿಕೆಯ ಎರಡನೇ ಸಾಲಿನಲ್ಲಿ ಹಾಗೂ ಆದೇಶ ಭಾಗದ ಎರಡನೇ ಸಾಲಿನಲ್ಲಿ "ಎ.ಸಿ.ಎಂ.ಎಂ.

ನ್ಯಾಯಾಲಯ" ಎಂಬುದರ ಬದಲಾಗಿ "2ನೇ ಎ.ಸಿ.ಎಂ.ಎಂ. ನ್ಯಾಯಾಲಯ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ 19–3–2009ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1162

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಾಲ ಭವನ ಸೊಸೈಟಿ ನೌಕರರಿಗೆ ರಜಾ ಸೌಲಭ್ಯ ಹಾಗೂ ಇನ್ನಿತರೆ ಸೌಲಭ್ಯಗಳನ್ನು ವಿಸ್ತರಿಸಲು ನಿಯಮಗಳಿಗೆ ತಿದ್ದುಪಡಿ ತರಲು ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಬಾಲಭವನ ಸೊಸೈಟಿ ಇವರ ಏಕ ಕಡತದ ಪ್ರಸ್ತಾವನೆ ಸಂಖ್ಯೆ: ಬಾಭಬೆಂ: ಸಿಬ್ಬಂದಿ: 2005–06, ದಿನಾಂಕ 21–2–09.

**ಪ್ರಸ್ತಾವನೆ :**

ಕಾರ್ಯದರ್ಶಿ, ಬಾಲಭವನ ಸೊಸೈಟಿ ಇವರ ಮೇಲೆ ಓದಲಾದ ಏಕ ಕಡತದಲ್ಲಿನ ಪ್ರಸ್ತಾವನೆಯಲ್ಲಿ ಬಾಲಭವನ ಸೊಸೈಟಿ ನೌಕರರು ರಜಾ ಹಾಗೂ ಇನ್ನಿತರೆ ಸೌಲಭ್ಯಗಳನ್ನು ವಿಸ್ತರಿಸಲು ಕೋರಿದ್ದು, ಸದರಿ ನೌಕರರಿಗೆ 2007ರ ವೇತನ ಶ್ರೇಣಿ, ತುಟ್ಟಿ ಭತ್ಯೆ, ಇನ್ನಿತರೆ ಸೌಲಭ್ಯಗಳನ್ನು ಸರ್ಕಾರದ ಆದೇಶದಂತೆ ವಿಸ್ತರಿಸುವ ಸಂದರ್ಭದಲ್ಲಿ ಕೆಲವೊಂದು ಷರತ್ತುಗಳನ್ನು ವಿಧಿಸಲಾಗಿದ್ದು, ಈ ಷರತ್ತುಗಳಿಗೆ ದಿನಾಂಕ 28–1–2009ರಂದು ನಡೆದ ಬಾಲಭವನ ಸೊಸೈಟಿಯ ವಾರ್ಷಿಕ ಸಾಮಾನ್ಯ ಸಭೆಯಲ್ಲಿ ತಿದ್ದುಪಡಿ ಮಾಡಲು ಕ್ರಮ ಕೈಗೊಂಡಿರುವ ಹಿನ್ನೆಲೆಯಲ್ಲಿ ನಿಯಮಾವಳಿಗಳಿಗೆ ತಿದ್ದುಪಡಿ ತರುವ ಸಲುವಾಗಿ ಸಲಹಾ ಸಮಿತಿಯನ್ನು ರಚಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಬಾಲ ಭವನ ಸೊಸೈಟಿ ಇದರ ನಿಯಮಗಳಿಗೆ ತಿದ್ದುಪಡಿ ತರಲು ಸಲಹಾ ಸಮಿತಿಯನ್ನು ರಚಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 15 ರಾಮಅ 2009, ಬೆಂಗಳೂರು, ದಿನಾಂಕ: 4ನೇ ಏಪ್ರಿಲ್ 2009**

ಬಾಲ ಭವನ ಸೊಸೈಟಿ ನೌಕರರಿಗೆ ರಜಾ ಸೌಲಭ್ಯ ಹಾಗೂ ಇನ್ನಿತರೆ ಸೌಲಭ್ಯಗಳನ್ನು ವಿಸ್ತರಿಸಲು ನಿಯಮಗಳಿಗೆ ತಿದ್ದುಪಡಿ ತರುವ ಸಲುವಾಗಿ ಬಾಲಭವನ ಸೊಸೈಟಿ ಇದರ ನಿಯಮಾವಳಿ ಮತ್ತು ನಿಬಂಧನೆ 13(1)ರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಗೆ ಸೂಚಿಸಿದ ಅಧಿಕಾರಿಗಳನ್ನೊಳಗೊಂಡ ಸಲಹಾ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ನಿರ್ದೇಶಕರು,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಅಪರ ಕಾರ್ಯದರ್ಶಿಗಳು,<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು) | ಸದಸ್ಯರು |
| 3. | ಸರ್ಕಾರದ ಅಪರ ಕಾರ್ಯದರ್ಶಿಗಳು,<br>ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನಾ ಇಲಾಖೆ | ಸದಸ್ಯರು |
| 4. | ಸರ್ಕಾರದ ಉಪ ಕಾರ್ಯದರ್ಶಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 5. | ಸರ್ಕಾರದ ಉಪ ಕಾರ್ಯದರ್ಶಿ,<br>ಆರ್ಥಿಕ ಇಲಾಖೆ (ವೆಚ್ಚ–3) | ಸದಸ್ಯರು |
| 6. | ಕಾರ್ಯದರ್ಶಿಗಳು,<br>ಬಾಲಭವನ ಸೊಸೈಟಿ | ಸದಸ್ಯ–ಕಾರ್ಯದರ್ಶಿ |

ಸದರಿ ಸಮಿತಿಯು ಎರಡು ತಿಂಗಳ ಅವಧಿಯಲ್ಲಿ ಕರಡು ನಿಯಮಗಳನ್ನು ರಚಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1163

**ಆರ್. ನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2(ಪ್ರ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ. ರುದ್ರೇಶ್, ಪಿ.ಐ. ಮೂಡಿಗೆರೆ ವೃತ್ತ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 05/ಇವಿ/ಸಿಬ್ಬಂದಿ–2, 2005–06, ಓ.ಬಿ.55/2007–08, ದಿನಾಂಕ 22–6–07.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)58/2007–08, ದಿ: 31–5–2008.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 22–7–2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)58/2007–08, ದಿ: 19–12–2008.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 213 ಸಿಎನ್‌ಎಸ್ 2008, ದಿನಾಂಕ 28–3–2009.

**ಪ್ರಸ್ತಾವನೆ :**

ಶ್ರೀ ಜಿ. ರುದ್ರೇಶ್, ಪಿ.ಐ., ಮೂಡಗೆರೆ ವೃತ್ತ, ಚಿಕ್ಕಮಗಳೂರು ಜಿಲ್ಲೆ ಇವರು ಭದ್ರಾವತಿ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ ಎಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

1) ದಿ: 6–1–05ರಂದು ಭದ್ರಾವತಿ ಕೆನರಾ ಬ್ಯಾಂಕ್, ಚನ್ನಗಿರಿ ರೋಡ್ ಶಾಖೆಗೆ ಶ್ರೀ ಮಹೇಶ್ ಉದ್ಯೋಗಿ ಶಿವಶಂಕರ್ ಪೆಟ್ರೋಲ್ ಬಂಕ್, ಭದ್ರಾವತಿ ಇವರು ರೂ. 2,11,117–00 ಗಳನ್ನು ಪಾವತಿಸಲು ಬಂದಾಗ ಹಣವನ್ನು ಬ್ಯಾಂಕ್ ದಪ್ತರಿ ಶ್ರೀ ನಾರಾಯಣ ಮತ್ತು ಶ್ರೀ ಮಹೇಶ್ ಎಣಿಸಿದಾಗ ರೂ. 1,20,000–00 ವ್ಯತ್ಯಾಸ ಇರುವುದಾಗಿ ನಿಮ್ಮ ಮುಂದೆ ದೂರು ಬಂದಿದ್ದು, ಈ ಹಣವನ್ನು ಈ ಮೂವರೊಳಗೆ ಯಾರಾದರೂ ಕಳವು ಮಾಡಿರಬಹುದೆಂದು ಮೇಲ್ನೋಟಕ್ಕೆ ಕಂಡು ಬಂದರೂ, ಈ ನಿಟ್ಟಿನಲ್ಲಿ ನೀವು ಪ್ರಕರಣವನ್ನು ಕಲಂ 379 ಅಥವಾ 380 ಐಪಿಸಿ ರೀತ್ಯಾ ದಾಖಲಿಸಿ ತನಿಖೆ ನಿರ್ವಹಿಸದೆ ಕರ್ತವ್ಯಲೋಪ ಎಸಗಿರುತ್ತೀರಿ.

2) ಬ್ಯಾಂಕಿನಲ್ಲಿ ಹಣ ವ್ಯತ್ಯಾಸವಾದ ಬಗ್ಗೆ ಅರ್ಜಿಯ ಆಧಾರದಲ್ಲಿ ಬ್ಯಾಂಕ್ ಉದ್ಯೋಗಿಗಳಾದ ಶ್ರೀ ದಪ್ತಗಿರಿ ನಾರಾಯಣ ಮತ್ತು ಶ್ರೀ ಅಪ್ಪಾಜಿರಾವ್, ಕ್ಯಾಷಿಯರ್, ಇವರನ್ನು ದಿ: 8–1–05 ರಂದು ಹಳೆನಗರ ಪೊಲೀಸ್ ಠಾಣೆಗೆ ಕರೆತಂದು ಅವರಿಗೆ ದೈಹಿಕ ಹಿಂಸೆ ನೀಡಿ, ಬೆದರಿಸಿ ಅಪ್ಪಾಜಿರಾವ್ ಇವರಿಂದ ರೂ. 1,20,000–00 ಹಣವನ್ನು ಅರ್ಜಿದಾರ ಶ್ರೀ ಮಹೇಶ್, ಇವರಿಗೆ ದಾಖಲೆ ಮುಖಾಂತರ ಹಣ ಪಾವತಿಸಲು ಸೂಚಿಸಿ ನಿಮ್ಮ ಅಧಿಕಾರವನ್ನು ವ್ಯವಸ್ಥಿತವಾಗಿ ದುರುಪಯೋಗ ಪಡಿಸಿಕೊಂಡು ಪ್ರಕರಣ ಹಾಗೂ ಅರ್ಜಿದಾರರು ನಿಮಗೆ ತಿಳಿದಿರುವ ಕಾರಣಕ್ಕೆ ಅವರಿಗೆ ನ್ಯಾಯ ಒದಗಿಸಿದ್ದೇನೆಂದು ಭಾವಿಸಿ ಕಳುವಾದ ಹಣವು ಯಾವ ರೀತಿ ಕಳುವಾಯಿತು ಹಾಗೂ ಕಾರಣರಾರು? ಎಂಬುದನ್ನು ವಿಚಾರಣೆಯಲ್ಲಿ ದೃಢಪಡಿಸದೇ, ಅರ್ಜಿದಾರರಿಂದ ವಿಚಾರಣೆಯನ್ನು ಮುಂದುವರೆಸುವುದು ಬೇಡ ಎಂದು ದೂರು ಪಡೆದು, ಕಾನೂನುಬದ್ಧ ಹಾಗೂ ವಿದಿಬದ್ಧ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಅನುಚಿತ ಪೊಲೀಸ್ ಅಧಿಕಾರಿಯ ರೀತಿಯಲ್ಲಿ ವರ್ತಿಸಿರುವಿರಿ.

3) ಅಪ್ಪಾಜಿರಾವ್ ಇವರ ವಿರುದ್ಧ ಕ್ರಿಮಿನಲ್ ಪ್ರಕರಣ ದಾಖಲಿಸುವುದಾಗಿ ಬೆದರಿಸಿ ಅವರಿಂದ ಅರ್ಜಿದಾರರಿಗೆ ಹಣವನ್ನು ದಾಖಲೆ ಮುಖಾಂತರ ಪಾವತಿಸಲು ಸೂಚಿಸಿ ಅರ್ಜಿದಾರರಿಂದ ಅರ್ಜಿಯ ವಿಚಾರಣೆಯನ್ನು ಮುಂದುವರಿಸಿದಂತೆ ಹೇಳಿಕೆ ಪಡೆದು, ಸದರಿ ಹಣ ಕಳವಾಗಲು ಕಾರಣರಾರು? ಎಂಬ ಅಪರಾಧದ ಅಂಶವನ್ನು ಪರಿಗಣಿಸದೇ ಒಂದು ವಿಚಾರಣೀಯ ಅಪರಾಧವನ್ನು ದಾಖಲಿಸದೆ ಕರ್ತವ್ಯ ಲೋಪವೆಸಗಿದ್ದೀರಿ.

4) ಬ್ಯಾಂಕ್ ಉದ್ಯೋಗಿಗಳಾದ ಶ್ರೀ ದಪ್ತರಿ ನಾರಾಯಣ ಹಾಗೂ ಶ್ರೀ ಅಪ್ಪಾಜಿರಾವ್, ಕ್ಯಾಷಿಯರ್, ಇವರನ್ನು ದಿ: 8–1–05 ರಂದು ದಾಣೆಗೆ ಕರೆಸಿ ಅರ್ಜಿದಾರರು ಹಾಗೂ ಪ್ರಕರಣ ನಿಮಗೆ ತಿಳಿದಿರುವ ಕಾರಣಕ್ಕಾಗಿ ಅವರುಗಳ ಮೇಲೆ ದೈಹಿಕ ಹಿಂಸೆ ನೀಡಿ ಇದರಿಂದಾಗಿ ಶ್ರೀ ದಪ್ತರಿ ನಾರಾಯಣ ತೀವ್ರವಾಗಿ ಅಸ್ವಸ್ಥಗೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದು, ಈ ಅಪರಾಧವು ವಿಚಾರಣೀಯ

ಅಪರಾಧವಲ್ಲದಿದ್ದರು ಬ್ಯಾಂಕ್ ಅಧಿಕಾರಿ ಮತ್ತು ಸಿಬ್ಬಂದಿಯವರ ಮೇಲೆ ದೈಹಿಕ ಹಿಂಸೆ ನೀಡಿ ಕಾನೂನಿನ ಅಡಿಯಲ್ಲಿ ಯಾವುದೇ ಕ್ರಮ ಕೈಗೊಳ್ಳದೆ ಕರ್ತವ್ಯ ಲೋಪವೆಸಗಿ ಪೊಲೀಸ್ ವಶದಲ್ಲಿನ ವ್ಯಕ್ತಿಯನ್ನು ಸರ್ವೋಚ್ಛನ್ಯಾಯಾಲಯದ ಆದೇಶಗಳ ಅನ್ವಯ ಕಾನೂನುಬದ್ದವಾಗಿ ನಡೆದುಕೊಳ್ಳದೆ ಕರ್ತವ್ಯಲೋಪವೆಸಗಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿ: 22–6–07ರ ಆದೇಶದಲ್ಲಿ ಅರ್ಜಿದಾರರ "ಇವರ ವೇತನವನ್ನು ಪೊಲೀಸ್ ನಿರೀಕ್ಷಕ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ 3 ವರ್ಷಗಳ ಕಾಲ ಕೆಳಗಿಳಿಸುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ: 31–5–2008ರ ಆದೇಶದಲ್ಲಿ ಭಾಗಶಃ ಪುರಸ್ಕರಿಸಿ, ಇವರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆಯ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಆರೋಪದಲ್ಲಿ ಇವರ ಪಾತ್ರವನ್ನು ಗಮನಿಸಿದಲ್ಲಿ ವಿಧಿಸಲಾದ ದಂಡನೆಯ ಪ್ರಮಾಣವು ಅಧಿಕವೆಂದು ಸರ್ಕಾರವು ಪರಿಗಣಿಸಿ ಈ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 293 ಪೊಸಿಅ 2008, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25(2)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ರುದ್ರೇಶ್, ಪಿ.ಐ. ಮೂಡಿಗೆರೆ ವೃತ್ತ, ಚಿಕ್ಕಮಗಳೂರು, ಇವರಿಗೆ ಮೇಲ್ಮನವಿ ಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನವನ್ನು ಮೂರು ತಿಂಗಳ ಕಾಲ ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ. ಆದರೆ ಸರ್ಕಾರಿ ಆದೇಶ ಸಂಖ್ಯೆ: ಒಇ 359 ಪೊಸಿಅ 2008, ದಿನಾಂಕ 9–4–2009 ರಲ್ಲಿ ವಿಧಿಸಿದ ದಂಡನೆಯ ಅವಧಿಯು ಮುಕ್ತಾಯಗೊಂಡ ತರುವಾಯದ ತಕ್ಷಣದಿಂದ ಈ ದಂಡನೆಯು ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1164

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎ.ಎಂ. ಹೊಂಗಲ, ಎ.ಎಚ್.ಸಿ., ಡಿ.ಎ.ಆರ್., ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ 2ಎ/ಪಿಆರ್/60/2007(ಅ.ಉ.ಸಂ.873), ದಿ: 31–8–07.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/188/ಉವ/2007, ದಿ: 11–3–08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 15–8–08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ ಅಪೀಲು (2)57/2008–09, ದಿನಾಂಕ 9–2–2009.

**ಪ್ರಸ್ತಾವನೆ :**

ಶ್ರೀ ಎ.ಎಂ. ಹೊಂಗಲ, ಎ.ಎಚ್.ಸಿ., ಡಿ.ಎ.ಆರ್. ಬೆಳಗಾವಿ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿಗಳಾದ ನೀವು ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ ಖೈದಿ ವಾಮಂಜೂರು ರೋಹಿ @ ರೋಹಿದಾಸ್‌ನನ್ನು ನೇರವಾಗಿ ಮಂಗಳೂರಿನ ಒಂದನೆ ಹೆಚ್ಚುವರಿ ಸೆಷನ್ಸ್ ನ್ಯಾಯಾಲಯಕ್ಕೆ ಹಾಜರುಪಡಿಸದೆ ಆತನೊಂದಿಗೆ ಶಾಮೀಲಾಗಿ ಆಹಾರ ಸೇವನೆ ಮಾಡಿದಲ್ಲದೆ ಆತನನ್ನು ಖಾಸಗಿ ಕಾರಿನಲ್ಲಿ ಆತನ ಮನೆಗೆ ಹಾಗೂ ಸಂಬಂಧಿಕರ ಮನೆಗಳಿಗೆ ಕರೆದುಕೊಂಡು ಹೋಗಿ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 31–8–07ರ ಆದೇಶದಲ್ಲಿ "ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 10–3–08ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಒಂದು ವರ್ಷಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 261 ಪೊಸಿಅ 2008, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಎಂ. ಹೊಂಗಲ, ಎ.ಎಚ್.ಸಿ., ಡಿ.ಎ.ಆರ್. ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1165

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಲ್.ವೈ. ಗಾಡಿವಡ್ಡರ್, ಸಿ.ಪಿ.ಸಿ. –1976, ನಂದಗಡ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ: ಸಿಬ್ಬಂದಿವ–2/ಇವಿ12/2006, ಅ.ಪು.ಸಂ: 619/2007, ದಿನಾಂಕ 20–6–2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/161/ಉವ/2006, ದಿ: 3–10–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 17–3–2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)8/2008–09, ದಿನಾಂಕ 24–6–2008.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 130 ಸಿಎನ್‌ಎಸ್ 08, ದಿನಾಂಕ 18–3–2009.

**ಪ್ರಸ್ತಾವನೆ :**

ಶ್ರೀ ಎಲ್.ವೈ. ಗಾಡಿವಡ್ಡರ್, ಸಿ.ಪಿ.ಸಿ. –1976, ನಂದಗಡ ಪೊಲೀಸ್ ಠಾಣೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ

ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

1. ಆಪಾದಿತ ಪೊಲೀಸ್ ಅಧಿಕಾರಿ ಸಿ.ಪಿ.ಸಿ. –1976 ಎಲ್.ವೈ. ಗಾಡಿವಡ್ಡರ್, ನಂದಗಡ ಪೊಲೀಸ್ ಠಾಣೆ ರವರಾದ **ಆಪಾದನೆ 1:** "ನೀವು ಹಾಗೂ ನಿಮ್ಮ ಇಬ್ಬರು ಮಕ್ಕಳೊಂದಿಗೆ ದಿ: 31–5–2006 ರಂದು 23–30 ಗಂಟೆಯ ಸುಮಾರಿಗೆ ಸಿ.ಪಿ.ಸಿ. –1517 ಎಸ್.ಎ. ತೊಲಗಿ, ನಂದಗಡ ಪೊಲೀಸ್ ಠಾಣೆ, ವಿನಾಕಾರಣ ಇವರ ಮನೆಯ ಬಾಗಿಲು ಒದ್ದು ಒಳಗೆ ಹೋಗಿ ಸಿ.ಪಿ.ಸಿ. –1517 ಎಸ್.ಎ. ತೊಲಗಿ ಇವರ ಪತ್ನಿ ಹಾಗೂ ಮಕ್ಕಳಿಗೆ ಅವಾಚ್ಯ ಶಬ್ದಗಳಿಂದ ಬೈದು ಹೊಡಿ–ಬಡಿ ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ಹಾಗೂ ಘೋರ ದುರ್ನಡತೆ ಪ್ರದರ್ಶಿಸಿರುವಿರಿ."
2. **ಆಪಾದಿತ ಪೊಲೀಸ್ ಅಧಿಕಾರಿ:** 1 ಸಿ.ಪಿ.ಸಿ. –1976 ಎಲ್.ವೈ. ಗಾಡಿವಡ್ಡರ್, ನಂದಗಡ ಪೊಲೀಸ್ ಠಾಣೆ, ರವರಾದ ನೀವು ಹಾಗೂ ಆ.ಪೊ.ಅ.: 1–ಸಿ.ಪಿ.ಸಿ.–2176 ಎ.ಕೆ. ಪಾಟೀಲ ಹಾಗೂ ಅ.ಪೊ.ಅ:3, ಸಿ.ಎಚ್.ಸಿ.–1946 ಡಿ.ವ್ಹಿ.ಜಡಗಿ ಇಬ್ಬರೂ ನಂದಗಡ ಪೊಲೀಸ್ ಠಾಣೆ ರವರು ಕೂಡಿ ಮೇಲಾಧಿಕಾರಿಗಳ ಅವಹೇಳನ ಮಾಡುವುದು, ಪೊಲೀಸ್ ಠಾಣೆಯ ಸಹದ್ಯೋಗಿ ಸಿಬ್ಬಂದಿಯವರ ಕೂಡಾ ಜಗಳ ಮಾಡುವುದು, ಬೈಯುವುದು ಮಾಡುತ್ತಾ ಪೊಲೀಸ್ ಇಲಾಖೆಯ ಹೆಸರು ಕೆಡಿಸುವಂತಹ ಅಪಕೃತ್ಯಗಳನ್ನು ಎಸಗಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 20–6–2007ರ ಆದೇಶದಲ್ಲಿ "ಅರ್ಜಿದಾರರ ವೇತನವನ್ನು ಪಿ.ಸಿ. ಹುದ್ದೆಯ ಕನಿಷ್ಟ ಮೂಲ ವೇತನಕ್ಕೆ ಇಳಿಸಿ ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವುದು ಹಾಗೂ ದಿ: 3–6–2006 ರಿಂದ 26–7–2006ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ 5 ವರ್ಷಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 3–10–2007ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರಿಗೆ ವಿಧಿಸಿದ ದಂಡನೆಯು ಅಧಿಕವಾಗಿದೆ ಎಂದು ಸರ್ಕಾರವು ಮನಗಂಡು ಈ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 263 ಪೊಸಿಅ 2008, ಬೆಂಗಳೂರು, ದಿನಾಂಕ: 9ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಲ್.ವೈ. ಗಾಡಿವಡ್ಡರ್, ಸಿ.ಪಿ.ಸಿ. –1976, ನಂದಗಡ ಪೊಲೀಸ್ ಠಾಣೆ, ಇವರಿಗೆ ಮೇಲ್ಮನವಿ ಪ್ರಾಧಿಕಾರ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿದು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1166

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಂ.ಎಂ. ನದಾಫ್, ಪಿ.ಎಸ್.ಐ., ಅಬಕಾರಿ ದಳ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಪಿಆರ್/156/2007, ಓಬಿ:12/2008, ದಿ: 5–1–08.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/24/ಉವ/2008, ದಿನಾಂಕ 13–8–08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 26–8–2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)65/2008–09, ದಿನಾಂಕ 9–2–09.

**ಪ್ರಸ್ತಾವನೆ :**

ಶ್ರೀ ಎಂ.ಎಂ. ನದಾಫ್, ಪಿ.ಎಸ್.ಐ., ಅಬಕಾರಿ ದಳ, ಹಾವೇರಿ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಗುತ್ತಲ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕರ್ತವ್ಯದಲ್ಲಿ ಬೇಜವಾಬ್ದಾರಿತನ, ತೀವ್ರ ನಿರ್ಲಕ್ಷತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿಯಲ್ಲಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

1) "ಶಿಸ್ತು ಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೀವು ದಿ: 16–11–2007ರಂದು ವಾರದ ಕವಾಯತ್ ಮಾಡುವ ಬಗ್ಗೆ ಜಿಲ್ಲಾ ನಿಯಂತ್ರಣ ಕೊಠಡಿಗೆ ಮಾಹಿತಿಯನ್ನು ನೀಡಿರುತ್ತೀರಿ. ಆದರೆ, ಸಿ.ಪಿ.ಐ., ಕಾವೇರಿ ಗ್ರಾಮೀಣ ವೃತ್ತ ರವರು ದಿ: 16–11–2007ರಂದು ಬೆಳಿಗ್ಗೆ 7–30 ಗಂಟೆಗೆ ಗುತ್ತಲ ಠಾಣೆಗೆ ಭೇಟಿ ನೀಡಿ ಪರಿಶೀಲಿಸಲಾಗಿ ಪಿ.ಎಸ್.ಐ., ಹಾಗೂ ಸಿಬ್ಬಂದಿಯವರು ಪರೇಡ ಮಾಡಿರುವುದಿಲ್ಲ. ಠಾಣೆಗೆ ಪಿ.ಎಸ್.ಐ ರವರು ಬಂದಿರುವುದಿಲ್ಲ. ಹಾಗೂ ಠಾಣಾ ದಿನಚರಿಯನ್ನು ಪ್ರಾರಂಭಿಸದೇ ಇರುವುದು ಕಂಡು ಬಂದಿದ್ದು ಈ ಬಗ್ಗೆ ನಿಮಗೆ ಕೇಳಲಾಗಿ ದಿ: 10–11–2007 ರಂದು ರಾತ್ರಿ ಮಹಾಪುರ ಗ್ರಾಮಕ್ಕೆ ಭೇಟಿ ನೀಡಿರುವುದಾಗಿ ತಿಳಿಸಿರುತ್ತೀರಿ. ವಾರದ ಕವಾಯತ್ ನಡೆಸದೇ ಹಾಗೂ ಠಾಣೆಗೆ ಬಾರದೇ ನೀವು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ ಪ್ರದರ್ಶಿಸಿರುತ್ತೀರಿ.

2) ದಿ: 15–11–2007ರ ಠಾಣಾ ದಿನಚರಿಯನ್ನು ಮಧ್ಯಾಹ್ನ 01–00 ಗಂಟೆಯ ವರೆಗೆ ಬರೆದಿದ್ದನ್ನು ಬಿಟ್ಟರೆ ಉಳಿದಂತೆ ಪ್ರಕರಣ ದಾಖಲ ಮಾಡಿದ ಬಗ್ಗೆ ಹಾಗೂ ಇತರೇ ಕರ್ತವ್ಯಗಳ ಬಗ್ಗೆ ದಿನಚರಿಯಲ್ಲಿ ನಮೂದಿಸಿರುವುದಿಲ್ಲ. ಅಪರಾಧ ಸಂಖ್ಯೆ: 185/2007 ಹಾಗೂ 166/2007ರ ಪ್ರಕರಣಗಳ ಪ್ರಥಮ ವರ್ತಮಾನ ವರದಿ ತಯಾರಿಸುವಾಗ ಎಸ್.ಎಚ್.ಡಿ. ಕ್ರಮ ಸಂಖ್ಯೆ ಅಂಕಣವನ್ನು ಖಾಲಿ ಬಿಟ್ಟು ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತನವನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 5–1–2008ರ ಆದೇಶದಲ್ಲಿ "ಇವರ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮೂರು ತಿಂಗಳುಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 13–8–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಕರ್ತವ್ಯದಲ್ಲಿ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡು ಬರುತ್ತದೆ, ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 289 ಪೊಸಿಅ 2008, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಂ. ನದಾಫ್, ಪಿ.ಎಸ್.ಐ., ಅಬಕಾರಿ ದಳ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1167

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ಇಜೇರಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಇಜೇರಿ ಮತ್ತು ಹರನೂರ ಗ್ರಾಮಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ದಿನಾಂಕ 8-7-2008ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2008-09/3783.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ಇಜೇರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಇಜೇರಿ ಮತ್ತು ಹರನೂರು ಗ್ರಾಮಗಳ ಜಮೀನುಗಳ ನ್ಯಾಯಾಲಯ ಪ್ರಕರಣಗಳಿಗೆ ಹೆಚ್ಚಿನ ಪರಿಹಾರ ಧನ ಪಾವತಿಸಲು ಹಣ ಭರವಸೆ ಪತ್ರ ಬಿಡುಗಡೆ ಮಾಡಲು ಕೋರಿ ಮೇಲೆ ಓದಲಾದ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 14-3-1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 24-1-1998.

ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಲ್ಲಿ ಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಪ್ರತಿ ಎಕರೆಗೆ ರೂ. 9,000/-ಗಳ ದರವನ್ನು ಖುಷ್ಕಿ ಜಮೀನಿಗೆ ಹಾಗೂ ಪೋಟಖರಾಬ್ ಜಮೀನಿಗೆ ಪ್ರತಿ ಎಕರೆಗೆ ರೂ. 800/-ಗಳಂತೆ ನಿಗದಿಪಡಿಸಲಾಗಿತ್ತು. ಪರಿಹಾರ ಧನ ಪಡೆದ ಇಜೇರಿ ಮತ್ತು ಹರನೂರ ಗ್ರಾಮಗಳ ಸ.ನಂ.ಗಳಿಗೆ ಸೇರಿದ ಒಟ್ಟು 34-30 ಎಕರೆ ಜಮೀನಿನ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಮಾನ್ಯ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಕೆಲವೊಂದು ಪ್ರಕರಣಗಳ ತೀರ್ಪುಗಳ ವಿರುದ್ಧ ಜಿಲ್ಲಾ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಲ್ಲಿಸಲಾಗಿತ್ತು. ಈ ಮೇಲ್ಮನವಿಗಳಲ್ಲಿ ಸಹ ನ್ಯಾಯಾಲಯದ ತೀರ್ಪು ಭೂಮಾಲೀಕರ ಪರವಾಗಿ ಆಗಿರುತ್ತದೆ. ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಎಂಎಫ್‌ಎ ಸಂಖ್ಯೆ | ಗ್ರಾಮ | ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| 1 | 291/99 | – | ಇಜೇರಿ | 184 | 03-10 | 368446 |
| 2 | 292/99 | 1957/03 | ಇಜೇರಿ | 182/2 | 12-30 | 490351 |
| 3 | 293/99 | 20/04 (ಎಲ್‌ಎಸಿಎ) | ಹರನೂರ | 175 | 01-18 | 164384 |
| 4 | 297/99 | – | ಹರನೂರ | 146 | 00-03 | 8503 |
| 5 | 318/99 | – | ಇಜೇರಿ | 190ಎ | 01-34 | 209731 |
| 6 | 319/99 | 6112/04 | ಇಜೇರಿ | 202 | 05-13 | 603685 |
| 7 | 321/99 | 6113/04 | ಇಜೇರಿ | 180 | 02-13 | 263581 |
| 8 | 322/99 | 6114/04 | ಇಜೇರಿ | 181 | 06-07 | 700048 |

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಎಂಎಫ್‌ಎ ಸಂಖ್ಯೆ | ಗ್ರಾಮ | ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| 9 | 535/99 | 6115/04 | ಇಜೇರಿ | 189 | 01–22 | 175720 |
| | ಒಟ್ಟು | | | | | **2984449** |

* ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದಲ್ಲಿ ವೆಚ್ಚ ಸಹ ಸೇರಿದೆ.

ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಟಿಪ್ಪಣಿ ಸಂಖ್ಯೆ: ಲಾ 1646 ಎಲ್‌ಎಸ್‌ಪಿ 2008, ದಿನಾಂಕ 2–12–08ರಲ್ಲಿ ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 77 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ಇಜೇರಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಇಜೇರಿ ಮತ್ತು ಹರನೂರ ಗ್ರಾಮಗಳ ಜಮೀನುಗಳಿಗೆ ಮೇಲ್ಕಂಡ ಪ್ರಸ್ತಾವನೆಯಲ್ಲಿ ತಿಳಿಸಿರುವ ಪ್ರಕರಣಗಳಲ್ಲಿ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರ ಮೊತ್ತ ಒಟ್ಟು ರೂ. 29,84,449–00ಗಳನ್ನು (ಇಪ್ಪತ್ತೊಂಭತ್ತು ಲಕ್ಷದ ಎಂಭತ್ತ ನಾಲ್ಕು ಸಾವಿರದ ನಾನೂರ ನಲವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ 16–5–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1168

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ :** ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನದ ಶೇ. 50ರಷ್ಟನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 16–7–2008ರ ಪತ್ರ ಸಂಖ್ಯೆ ಮುಸನೀ(ದ)/ಲೆಶಾ/ಲೆಸ–1/3/ಭೂಸ್ವಾಧೀನ/2008–09/1462.

**ಪ್ರಸ್ತಾವನೆ :**

ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರು ಮೇಲೆ ಓದಲಾದ ಪತ್ರದಲ್ಲಿ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಚಿತ್ರದುರ್ಗದ 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 31–10–91.
– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 29–3–95.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯ, ಚಿತ್ರದುರ್ಗ ಇಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ: 141/95ನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ

ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಈ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲಿ ಎಂ.ಎಫ್.ಎ.ಸಾ. 6032/04ನ್ನು ದಾಖಲಿಸಲಾಗಿತ್ತು. ಆದರೆ, ಪ್ರಕರಣದಲ್ಲಿಯ ಮೌಲ್ಯ ರೂ. 1.00 ಲಕ್ಷಗಳಿಗಿಂತ ಕಡಿಮೆಯಿರುವುದರಿಂದ ಮೇಲ್ಮನವಿಯನ್ನು ಜಿಲ್ಲಾ ನ್ಯಾಯಾಲಯದಲ್ಲಿ ದಾಖಲಿಸಲು ಅವಕಾಶ ನೀಡುವಂತೆ ಸರ್ಕಾರಿ ವಕೀಲರು ಮನವಿ ಮಾಡಿದ್ದರ ಮೇರೆಗೆ ಉಚ್ಚ ನ್ಯಾಯಾಲಯವು ಈ ಮನವಿಯನ್ನು ಅಂಗೀಕರಿಸಿದೆ. ಅದರಂತೆ ಚಿತ್ರದುರ್ಗ ಜಿಲ್ಲಾ ನ್ಯಾಯಾಲಯದಲ್ಲಿ ಎಂ.ಎ. ಸಂಖ್ಯೆ: 93/08ನ್ನು ದಾಖಲಿಸಲಾಗಿದೆ.

ಎಲ್.ಎ.ಸಿ. ಸಂಖ್ಯೆ: 141/95ರ ಜಾರಿಗಾಗಿ ಭೂಮಾಲೀಕರು ಜಪ್ತಿ ಆದೇಶವನ್ನು ನ್ಯಾಯಾಲಯದಿಂದ ಪಡೆದುಕೊಂಡಿರುವುದರಿಂದ, ಜಿಲ್ಲಾ ನ್ಯಾಯಾಲಯದ ತೀರ್ಪನ್ನು ಕಾಯ್ದಿರಿಸಿ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಲೆಕ್ಕಹಾಕಿದ ಪರಿಹಾರ ಮೊತ್ತದ ಶೇ. 50ರಷ್ಟನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡಲು ತೀರ್ಮಾನಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 92 ಭೂಸ್ವಾಪ್ರ 2007, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತದ ಶೇ. 50ರಷ್ಟು ಅಂದರೆ ರೂ. 1,42,842–00ಗಳನ್ನು (ಒಂದು ಲಕ್ಷದ ನಲವತ್ತೆರಡು ಸಾವಿರದ ಎಂಟು ನೂರ ನಲವತ್ತೆರಡು ರೂ.ಗಳು ಮಾತ್ರ) ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಜಿಲ್ಲಾ ನ್ಯಾಯಾಲಯದಲ್ಲಿ ಸಲ್ಲಿಸಿರುವ ಮೇಲ್ಮನವಿ ಸಂಖ್ಯೆ: 93/08ರ ತೀರ್ಪನ್ನು ಕಾಯ್ದಿರಿಸಿ, ಪರಿಹಾರ ಮೊತ್ತವನ್ನು ಭೂಮಾಲೀಕರಿಗೆ ಪಾವತಿಸದೇ ಇರುವ ಷರತ್ತಿಗೊಳಪಟ್ಟು ನ್ಯಾಯಾಲಯದಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1169 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ :** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಬುಕ್ಕಾಪಟ್ಟಣ ಹೋಬಳಿ, ಗಾಣದ ಹುಣಿಸೇ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 9–3–09ರ ಪತ್ರ ಸಂಖ್ಯೆ: ಮುಸನೀ(ದ)/ಲೆಶಾ/ಲೆಸ–1/3/ಭೂಸ್ವಾಧೀನ/08–09/606.

**ಪ್ರಸ್ತಾವನೆ :**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರದಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಬುಕ್ಕಾಪಟ್ಟಣ ಹೋಬಳಿ, ಗಾಣದ ಹುಣಿಸೇ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 10,69,043–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 29–7–82.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 2–6–86.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಶಿರಾ ಸಿವಿಲ್ (ಹಿರಿಯ ಶ್ರೇಣಿ)

